ನವ ಭಾರತಕ್ಕಾಗಿ
ನವ ಕರ್ನಾಟಕ



ಶ್ರೀ ನರೇಂದ್ರ ಮೋದಿ
ಸನ್ಮಾನ್ಯ ಪ್ರಧಾನಮಂತ್ರಿಗಳು





ಶ್ರೀ ಬಸವರಾಜ ಎಸ್. ಬೊಮ್ಮಾಯಿ
ಸನ್ಮಾನ್ಯ ಮುಖ್ಯಮಂತ್ರಿಗಳು

ಏಪ್ರಿಲ್ 14, 1891 – ಡಿಸೆಂಬರ್ 6, 1956

ಸಂವಿಧಾನ ಶಿಲ್ಪಿ, ಮಹಾಮಾನವತಾವಾದಿ ಹಾಗೂ ಸಮಾನತೆಯ ಹರಿಕಾರರಾದ

# ಭಾರತ ರತ್ನ ಡಾ॥ ಬಿ.ಆರ್. ಅಂಬೇಡ್ಕರ್ ಅವರಿಗೆ ಗೌರವ ನಮನಗಳು

ಡಾ॥ ಬಿ.ಆರ್. ಅಂಬೇಡ್ಕರ್ ಅವರು ಮಹಿಳೆಯರ ಹಕ್ಕುಗಳು ಹಾಗೂ ಸಮಾನತೆಗಾಗಿ ಮತ್ತು ಶೋಷಿತ ವರ್ಗಗಳ ಹಕ್ಕಿಗಾಗಿ ಹೋರಾಡಿದ ಸಮಾಜ ಸುಧಾರಕರು. ಅವರು ತೋರಿಸಿದ ಸಮಾನತೆಯ ಹಾದಿಯಲ್ಲಿ ನಡೆಯುವುದು ನಾವು ಅವರಿಗೆ ಸಲ್ಲಿಸುವ ದೊಡ್ಡ ಗೌರವವಾಗುತ್ತದೆ.



## ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಅಭಿವೃದ್ಧಿಗೆ ರಾಜ್ಯ ಸರ್ಕಾರದ ಕ್ರಮಗಳು

- SCSP/TSP ಯೋಜನೆಗಳಿಗೆ ರೂ.29,165.81 ಕೋಟಿ (SCSP–ರೂ.20,843.03 ಕೋಟಿ; TSP–ರೂ.8322.78 ಕೋಟಿ)
- ಪ್ರಸಕ್ತ ಸಾಲಿನಲ್ಲಿ ಸಮಾಜ ಕಲ್ಯಾಣ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆಗೆ ನೀಡಿರುವ ಒಟ್ಟು ಅನುದಾನ ರೂ.5,998.25 ಕೋಟಿ
- ಪ.ಜಾತಿ ಮೀಸಲಾತಿ ಪ್ರಮಾಣ ಶೇ.15 ರಿಂದ ಶೇ.17ಕ್ಕೆ ಹಾಗೂ ಪ.ಪಂಗಡಗಳ ಮೀಸಲಾತಿ ಪ್ರಮಾಣ ಶೇ.3 ರಿಂದ ಶೇ.7ಕ್ಕೆ ಏರಿಕೆ
- ಪರಿಶಿಷ್ಟ ವರ್ಗಗಳ ಕಲ್ಯಾಣಕ್ಕೆ ಪ್ರತ್ಯೇಕ ಸಚಿವಾಲಯ
- ಪ.ಜಾತಿ/ಪ.ಪಂಗಡದವರಿಗೆ ಭೂ ಒಡೆತನ ಯೋಜನೆಯಡಿ ಘಟಕ ವೆಚ್ಚ 15 ಲಕ್ಷ ರೂ.ಗಳಿಂದ 20 ಲಕ್ಷ ರೂ.ಗಳಿಗೆ ಹೆಚ್ಚಳ
- ರೂ.58.00 ಕೋಟಿ ವೆಚ್ಚದಲ್ಲಿ ವಿಕಾಸಸೌಧದ ಮುಂಭಾಗದಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ಸ್ಫೂರ್ತಿ ಭವನ ನಿರ್ಮಾಣಕ್ಕೆ ಶಿಲಾನ್ಯಾಸ
- ಪ.ಜಾತಿ/ಪ.ಪಂಗಡದ ನಿಗಮಗಳಿಗೆ ಸ್ವಯಂ ಉದ್ಯೋಗ, ಗಂಗಾ ಕಲ್ಯಾಣ, ಇತ್ಯಾದಿ ಕಾರ್ಯಕ್ರಮಗಳಿಗೆ ರೂ.1,000.19 ಕೋಟಿ ಅನುದಾನ (ಹೆಚ್ಚುವರಿಯಾಗಿ ರೂ.420 ಕೋಟಿ ಸೇರಿ)
- ಲೋಕೋಪಯೋಗಿ ಇಲಾಖೆಯಿಂದ SCSP/TSP ಅನುದಾನದಲ್ಲಿ ರೂ.750 ಕೋಟಿ ವೆಚ್ಚದಲ್ಲಿ 100 ಡಾ॥ ಬಿ.ಆರ್. ಅಂಬೇಡ್ಕರ್ ವಿದ್ಯಾರ್ಥಿನಿಲಯ ಹಾಗೂ 11 KRIES (ವಸತಿ ಶಾಲೆಗಳು) ಕಟ್ಟಡಗಳ ನಿರ್ಮಾಣ
- ಬೆಳಗಾವಿ, ಹುಬ್ಬಳ್ಳಿ–ಧಾರವಾಡ, ಕಲಬುರಗಿ, ಮಂಗಳೂರು ಮತ್ತು ಮೈಸೂರಿನಲ್ಲಿ ತಲಾ 1,000 ವಿದ್ಯಾರ್ಥಿ ಸಾಮರ್ಥ್ಯದ ಬಹುಮಹಡಿ ದೀನದಯಾಳ್ ಉಪಾಧ್ಯಾಯ ಸೌಹಾರ್ದ ವಿದ್ಯಾರ್ಥಿನಿಲಯಗಳಿಗೆ ರೂ.250 ಕೋಟಿ
- ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಮಾಸಿಕ ಭೋಜನ ವೆಚ್ಚ ರೂ.1,600/– ರಿಂದ ರೂ.1,750/–ಕ್ಕೆ ಹೆಚ್ಚಳ ಮತ್ತು ಅದೇ ರೀತಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ಮಾಸಿಕ ಭೋಜನ ವೆಚ್ಚ ರೂ. 1,500/– ರಿಂದ ರೂ. 1,650/– ಕ್ಕೆ ಹೆಚ್ಚಳ.
- ಎಸ್‌ಸಿ/ಎಸ್‌ಟಿ ನಿರುದ್ಯೋಗಿಗಳಿಗೆ ಇ–ಕಾಮರ್ಸ್ ಯೋಜನೆಯಡಿ ವಿದ್ಯುತ್ ಹಾಗೂ ಇತರೆ ದ್ವಿಚಕ್ರ ವಾಹನಗಳನ್ನು ಖರೀದಿಸಲು ಒಟ್ಟು 22,400 ಫಲಾನುಭವಿಗಳಿಗೆ ರೂ.50,000 ದವರೆಗೆ ಸಹಾಯಧನ ಮತ್ತು ರೂ. 20,000 ಸಾಲ.
- ಸರ್ಕಾರದ ಎಲ್ಲಾ ನಿಗಮಗಳಲ್ಲಿ ಸ್ವಯಂ ಉದ್ಯೋಗಗಳಲ್ಲಿ ಎಸ್‌ಸಿ/ಎಸ್‌ಟಿ ಮಹಿಳೆಯರಿಗೆ ಶೇ.25 ಮೀಸಲಾತಿ
- 300 ಎಸ್‌ಸಿ/ಎಸ್‌ಟಿ ಮಹಿಳೆಯರಿಗೆ ಬೆಂಗಳೂರಿನ ಪ್ರತಿಷ್ಠಿತ ಐಐಎಂನಲ್ಲಿ ಉದ್ಯಮಶೀಲತಾ ತರಬೇತಿ. ಮೂರು ಬ್ಯಾಚ್‌ಗಳ ತರಬೇತಿ ಪ್ರಗತಿಯಲ್ಲಿದೆ.
- ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಪ.ಜಾತಿ/ಪ.ಪಂಗಡದವರಿಗೆ ನೀಡುವ ಮನೆ ನಿರ್ಮಾಣ ಸಹಾಯಧನ ರೂ.1.75 ಲಕ್ಷದಿಂದ ರೂ.2 ಲಕ್ಷಕ್ಕೆ ಹೆಚ್ಚಳ
- ಬಡತನ ರೇಖೆಗಿಂತ ಕೆಳಗಿರುವ ಪ.ಜಾತಿ/ಪ.ಪಂಗಡಗಳಿಗೆ ಮಾಸಿಕ 75 ಯೂನಿಟ್ ಉಚಿತ ವಿದ್ಯುತ್
- ಡಾ॥ ಬಿ.ಆರ್. ಅಂಬೇಡ್ಕರ್ ಅವರು ಕರ್ನಾಟಕದಲ್ಲಿ ಭೇಟಿ ನೀಡಿದ 10 ಪ್ರಮುಖ ಸ್ಥಳಗಳ ಅಭಿವೃದ್ಧಿಗೆ ರೂ.20 ಕೋಟಿ
- ಪ್ರಬುದ್ಧ ಯೋಜನೆಯಡಿ ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗಕ್ಕಾಗಿ ಪ.ಜಾತಿಯ 70 ಹಾಗೂ ಪ.ಪಂಗಡದ 23 ವಿದ್ಯಾರ್ಥಿಗಳ ನಿಯೋಜನೆ
- ಪ.ಜಾತಿ, ಅಲೆಮಾರಿ, ಅರೆ ಅಲೆಮಾರಿ, ಸೂಕ್ಷ್ಮ, ಅತೀ ಸೂಕ್ಷ್ಮ ಸಮುದಾಯಗಳ ಅಭಿವೃದ್ಧಿಗೆ ರೂ.50 ಕೋಟಿ ಅನುದಾನ
- ಪ.ಜಾತಿ/ಪ.ಪಂಗಡದ ಉದ್ಯಮಿಗಳಿಗೆ ಶೇ.4 ಬಡ್ಡಿ ಸಹಾಯಧನ ಯೋಜನೆಗೆ ರೂ.68.87 ಕೋಟಿ ಅನುದಾನ
- ಪ.ಜಾತಿ/ಪ.ಪಂಗಡದವರಿಗೆ ಉದ್ಯಮ ಸ್ಥಾಪಿಸಲು ಕೈಗಾರಿಕಾ ನಿವೇಶನ/ಶೆಡ್‌ಗಳ ನಿರ್ಮಾಣಕ್ಕಾಗಿ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಗೆ ರೂ.200 ಕೋಟಿ ಅನುದಾನ
- ಪ.ಜಾತಿ/ಪ.ಪಂಗಡಗಳ ಸಮುದಾಯ ಭವನಗಳು, ಕಾಲೋನಿ ಅಭಿವೃದ್ಧಿ ಮತ್ತು ಸಂಘ ಸಂಸ್ಥೆಗಳಿಗೆ ಧನಸಹಾಯಕ್ಕಾಗಿ ರೂ.177 ಕೋಟಿ ಅನುದಾನ.
- ಪೌರಕಾರ್ಮಿಕರಿಗೆ ಸಾಮಾಜಿಕವಾಗಿ ಗೌರವ, ಸೌಲಭ್ಯ ಹಾಗೂ ಸುರಕ್ಷತೆ ನೀಡುವ ಉದ್ದೇಶದಿಂದ ಸರ್ಕಾರವು ಪೌರಕಾರ್ಮಿಕರ ಸಮಸ್ಯೆಗಳಿಗೆ ಮಾನವೀಯತೆಯಿಂದ ಸ್ಪಂದಿಸಿ ಮಾಸಿಕ ರೂ. 2,000 ಸಂಕಷ್ಟ ಭತ್ಯೆ ನೀಡುತ್ತಿದೆ.
- 11,136 ಪೌರಕಾರ್ಮಿಕರ ಉದ್ಯೋಗ ಖಾಯಂಗೊಳಿಸಿ ಆದೇಶ ಹೊರಡಿಸಿದೆ.

"ನಮ್ಮ ವೈವಿಧ್ಯಮಯ ಸಂಸ್ಕೃತಿ ಮತ್ತು ಪರಂಪರೆಯನ್ನು ಗೌರವಿಸುವುದು ಮತ್ತು ಕಾಪಾಡುವುದು." - ಪ್ರತಿಯೊಬ್ಬ ಭಾರತೀಯನ ಸಂವಿಧಾನಬದ್ಧ ಮೂಲಭೂತ ಕರ್ತವ್ಯ

ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ



ಕರ್ನಾಟಕ ಗಾಂಧಿ
ಸ್ಮಾರಕ ನಿಧಿ

**ಬಾಪು ಪ್ರಪಂಚ**
ಕನ್ನಡ–ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
**ಇಂದಿರಾ ಕೃಷ್ಣಪ್ಪ**

Editor :
**Indira Krishnappa**

**ಪ್ರಕಾಶಕರು :**
**ಕಾರ್ಯದರ್ಶಿ,**
**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**CreativeGeekZ**
Yadhava College Road,
Madhavanagara, Bengaluru - 560001
Ph : +91 80 40927049
E-mail : mail@creativegeekz.com


ಲೇಖನಗಳಲ್ಲಿ ವ್ಯಕ್ತವಾದ ಅಭಿಪ್ರಾಯಗಳು ಲೇಖಕರವು
ಬಾಪು ಪ್ರಪಂಚದಲ್ಲ ಚಿತ್ರಗಳು ಸಾಂದರ್ಭಿಕವಾಗಿರುತ್ತದೆ

Design : **Ujwal Creations,** Bangalore


BAPU PRAPANCHA

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಬಾಪು ಪ್ರಪಂಚ

ಕನ್ನಡ–ಇಂಗ್ಲೀಷ್ ಮಾಸಿಕ ಸಂಪುಟ–04 • ಸಂಚಿಕೆ–8 • ಜನವರಿ 2023









# ಸರ್ವೋದಯ ದಿನಾಚರಣೆ

**ಜ**ನವರಿ 30 . 1948 . ಭಾರತದ ಇತಿಹಾಸದಲ್ಲಿ ಕರಾಳ ದಿನ. ಸೂರ್ಯ ಮುಳುಗದ ಸಾಮ್ರಾಜ್ಯ ಎಂದು ಕರೆಯಲ್ಪಡುತ್ತಿದ್ದ ಬ್ರಿಟಿಷ್ ಸಾಮ್ರಾಜ್ಯವನ್ನು ಅಹಿಂಸೆ ಎಂಬ ಮಹಾ ಅಸ್ತ್ರವನ್ನು ಬಳಸಿ ಮಣಿಸಿದ ಮಹಾತ್ಮ ಗಾಂಧೀಜಿಯವರು ಹುತಾತ್ಮರಾದ ದಿನ. ಇಡೀ ಜಗತ್ತೇ ಅವರನ್ನು ವಿಸ್ಮಯದ ನೋಟದಿಂದ ನೋಡಿ ಗೌರವಿಸುತ್ತಿತ್ತು. ಜಗದ್ವಿಖ್ಯಾತ ವಿಜ್ಞಾನಿ ಅಲ್ಬರ್ಟ್ ಐಸಾಕ್ ನ್ಯೂಟನ್ ಅವರು ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರನ್ನು "ರಕ್ತ ಮಾಂಸಗಳಿಂದ ರೂಪಿತವಾಗಿದ್ದ ಇಂಥ ಮನುಷ್ಯನೊಬ್ಬ ಈ ಭೂಮಿಯ ಮೇಲೆ ಓಡಾಡುತ್ತಿದ್ದ ಎನ್ನುವುದನ್ನು ಮುಂದಿನ ಪೀಳಿಗೆಯ ಜನ ಅಷ್ಟು ಸುಲಭವಾಗಿ ನಂಬುವುದಿಲ್ಲ." ಎಂದು ಅಚ್ಚರಿಯಿಂದ ಬಣ್ಣಿಸಿದ್ದರು. ಇಂಥ ಮಹಾತ್ಮರನ್ನು ಭಾರತೀಯ ದುರಾತ್ಮನೇ ಗುಂಡಿಕ್ಕಿ ಕೊಂದ ದಿನ. ಇಂಥ ಮಹಾನ್ ನಾಯಕರು ಹುತಾತ್ಮರಾದ ದಿನವನ್ನು ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಹುತಾತ್ಮರಾದ ಎಲ್ಲ ಜನರ ಗೌರವಾರ್ಥ "ಹುತಾತ್ಮರ ದಿನಾಚರಣೆ " ಎಂದು ಸಹ ಕರೆಯಲಾಗುತ್ತಿದೆ. ಸರ್ವರ ಒಳಿತನ್ನು ಬಯಸಿ ತಮ್ಮ ಜೀವನವನ್ನೇ ಈ ಉದಾತ್ತ ಧ್ಯೇಯಕ್ಕಾಗಿ ಸಮರ್ಪಿಸಿದ ಈ ದಿನವನ್ನು **'ಸರ್ವೋದಯ ದಿನಾಚರಣೆ'** ಎಂದು ಸಹ ಹೆಸರಿಸಲಾಗಿದೆ.





ಗಾಂಧೀಜಿ ಹತ್ಯೆಯಾದ ಸ್ಥಳ



ಬಿರ್ಲಾ ಭವನದೊಳಗೆ ಮಾಹಿತಿ ಫಲಕಗಳು

ಬ್ರಿಟಿಷರ ಆಳ್ವಿಕೆಯ ವಿರುದ್ಧ ಕೋಟ್ಯಾಂತರ ಭಾರತೀಯರನ್ನು ಒಗ್ಗೂಡಿಸಿ ಸತ್ಯ , ಶಾಂತಿ ಎಂಬ ಭಾರತೀಯ ಪರಂಪರೆಯ ಮೌಲ್ಯಗಳನ್ನೇ ಬಳಸಿ ಅಹಿಂಸಾ ಹೋರಾಟದ ಮೂಲಕ ಆಂಗ್ಲರನ್ನು ಮಣಿಸಿ ರಕ್ತ ರಹಿತ ಕ್ರಾಂತಿಯ ಮೂಲಕ ಭಾರತಕ್ಕೆ ಸ್ವಾತಂತ್ರ್ಯವನ್ನು ಗಳಿಸಿ ಕೊಟ್ಟ ಮಹಾನ್ ವಿಶ್ವ ನಾಯಕ ಮಹಾತ್ಮ ಗಾಂಧೀಜಿಯವರನ್ನು ಗೌರವದಿಂದ ಸ್ಮರಿಸಿಕೊಳ್ಳುವ ಈ ಸರ್ವೋದಯ ದಿನ ಭಾರತೀಯರೆಲ್ಲರ ಪಾಲಿಗೆ ಸಿಹಿ ಮತ್ತು ಕಹಿ ಅನುಭವದ ದಿನ.

ನಿಜ ಹೇಳ ಬೇಕೆಂದರೆ ; ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಗಾಂಧೀಜಿ ಖಿನ್ನರಾಗಿದ್ದರು. ತಾವು ಬಯಸಿದ ರೀತಿಯಲ್ಲಿ ಭಾರತದ ರಾಜಕೀಯ ವ್ಯವಸ್ಥೆ ಮತ್ತು ಕೋಮು ಸೌಹಾರ್ದತೆ ಭಾರತದಲ್ಲಿ ಅರಳುತ್ತಿಲ್ಲ ಎನ್ನುವ ಒಳಗುದಿಯ ನೋವು ಅವರನ್ನು ಬಾಧಿಸುತ್ತಿತ್ತು . ಭಾರತ ಮತ್ತು ಪಾಕಿಸ್ತಾನದಲ್ಲಿ ಕೋಮು ಗಲಭೆಗಳು ದಿನ ನಿತ್ಯದ ಸಂಗತಿಗಳಾಗಿದ್ದವು. ಇಂಥ ಸಂದಿಗ್ಧ ಸ್ಥಿತಿಯಲ್ಲಿ ಗಾಂಧೀಜಿಯವರನ್ನು ಸರ್ಕಾರ ಪ್ರಧಾನಿ ನೆಹರು ಮತ್ತು ಗೃಹಮಂತ್ರಿ ಪಟೇಲ್ ಅವರ ಅಧಿಕೃತ ನಿವಾಸಗಳಿಗೆ ಅತೀ ಹತ್ತಿರದಲ್ಲಿದ್ದ ದೆಹಲಿಯ ಬಿರ್ಲಾ ಭವನದಲ್ಲಿ ವಾಸ್ತವ್ಯ ಇರಿಸಲಾಗಿತ್ತು. ಗಾಂಧೀಜಿ ತಮ್ಮ ಬದುಕಿನ ಅಂತಿಮ 144 ದಿನಗಳನ್ನು ಭಾರತದ ಪ್ರತಿಷ್ಠಿತ ಉದ್ಯಮಿ ಬಿರ್ಲಾ ಅವರಿಗೆ ಸೇರಿದ್ದ ಈ ಬಿರ್ಲಾ ಭವನದಲ್ಲಿ ಕಳೆದರು. 1948ರ ಜನವರಿ 30 ಗಾಂಧೀಜಿಯವರ ಹತ್ಯೆ ಇಲ್ಲಿಯೇ ಆಯಿತು. ಈಗ ಈ ಬಿರ್ಲಾ ಭವನವನ್ನು **'ಗಾಂಧಿ ಸ್ಮೃತಿ'** ಹೆಸರಿನಲ್ಲಿ ಮ್ಯೂಸಿಯಂ ಮಾಡಿ ಸಂರಕ್ಷಿಸಿದ್ದಾರೆ. ಈಗ ಈ ರಸ್ತೆಗೆ ಜನವರಿ 30ರ ಮಾರ್ಗ ಎಂದು ದೆಹಲಿಯ ಆಡಳಿತ ಹೆಸರಿಸಿದೆ. ಅಲ್ಲಿನ ಸಚಿತ್ರ ನೋಟಗಳು ಇಲ್ಲಿವೆ.





ಗಾಂಧೀಜಿ ಕುಳಿತು ಕೊಳ್ಳುತ್ತಿದ್ದ ಕೊಠಡಿ




ಗಾಂಧೀಜಿ ಬಳಸುತ್ತಿದ್ದ ವಸ್ತುಗಳು

# ಬಿರ್ಲಾ ಭವನದ ಮ್ಯೂಸಿಯಂನಲ್ಲಿ ಗಾಂಧಿ ಬದುಕಿನ ಘಟನೆಗಳ ಬೊಂಬೆ ನೋಟ
















ಬಿರ್ಲಾ ಭವನ

### ಹಂತಕನ ಸಂಚು – 'ಹೇ-ರಾಮ್' !

ಜನವರಿ 30 ರಂದು ಎಂದಿನಂತೆ ಬೆಳಗಿನ ಝಾವ 3.30 ಕ್ಕೆ ಎದ್ದ ಗಾಂಧಿ ಶೌಚಕರ್ಮಗಳನ್ನು ಮುಗಿಸಿ ಪ್ರಾರ್ಥನಾ ಸಭೆ ನಡೆಸಿ ಬೆಳಗಿನ ಉಪಹಾರ ಸ್ವೀಕರಿಸಿದರು. ಬಂಗಾಳಿ ಕಲಿಕೆಯ ಪಾಠಗಳ ಪುನರಾವರ್ತನೆ ಮಾಡಿಕೊಂಡರು. ಸ್ವಲ್ಪ ಹೊತ್ತು ಮಲಗಿದರು. ಮತ್ತೆ ಎದ್ದು ಮಧ್ಯಾಹ್ನದ ಮೇಕೆ ಹಾಲು, ಬೇಯಿಸಿದ ತರಕಾರಿ ಮತ್ತು ಹಣ್ಣುಗಳ ಊಟು ಮಾಡಿದರು. ತಮ್ಮನ್ನು ಭೇಟಿ ಮಾಡಲು ಬಂದಿದ್ದ ಹಲವಾರು ಜನರೊಂದಿಗೆ ಮಾತಾಡಿದರು. ಫೆಬ್ರವರಿ 2ರಂದು ಸೇವಾಗ್ರಾಮದಲ್ಲಿ ಆಯೋಜಿಸಲಾಗಿದ್ದ ರಚನಾತ್ಮಕ ಕಾರ್ಯಕರ್ತರ ಸಭೆಯ ಸಿದ್ಧತೆ ಬಗ್ಗೆ ಮತ್ತು ಮಹದೇವ ದೇಸಾಯಿಯವರ ಜೀವನ ಚರಿತ್ರೆ ಬರೆಯುವ ಮತ್ತು ಅವರ ದಿನಚರಿಗಳನ್ನು ಸಂಕಲಿಸುವ ಕೆಲಸಗಳ ಬಗ್ಗೆ ಸಂಬಂಧಪಟ್ಟವರೊಂದಿಗೆ ಚರ್ಚಿಸಿದರು. ಸಂಜೆ ನಾಲ್ಕೂವರೆಗೆ ಪಟೇಲರು ಸರ್ಕಾರದಲ್ಲಿನ ಸಮಸ್ಯೆಗಳನ್ನು ಕುರಿತು ಚರ್ಚಿಸಲು ಬರುವವರಿದ್ದರು. ಅದಕ್ಕೆ ಮುಂಚೆ ಅವರು ಕಾಂಗ್ರೆಸ್ ವಿಸರ್ಜನೆ ಕುರಿತ ತಮ್ಮ ಟಿಪ್ಪಣಿಗೆ ಅಂತಿಮ ರೂಪ ನೀಡುವ ಕೆಲಸ ಮಾಡಿದರು. ಅದನ್ನು ಪರಿಶೀಲಿಸುವಂತೆ ಪ್ಯಾರೇಲಾಲರಿಗೆ ನೀಡಿದರು. ಪಟೇಲರೊಡನೆ ಮಾತುಕತೆಯ ನಂತರ ಸಂಜೆಯ ಪ್ರಾರ್ಥನಾ ಸಭೆ ನಡೆದು ಆನಂತರ ನೆಹರೂ ಗಾಂಧಿಯವರನ್ನು ಭೇಟಿ ಮಾಡುವ ಕಾರ್ಯಕ್ರಮವೂ ಇತ್ತು.

ಪಟೇಲರೊಡನೆ ಮಾತುಕತೆ ಸುದೀರ್ಘವಾಗುತ್ತಾ ಹೋಗಿ ಐದು ಘಂಟೆಗೆ ಆರಂಭವಾಗಬೇಕಿದ್ದ ಪ್ರಾರ್ಥನಾ ಸಭೆಗೆ ತಡವಾಗತೊಡಗಿದಾಗ ಗಾಂಧಿಯವರಿಗೆ ಹೆಗಲು ಕೊಡುವ ಸಂಗಾತಿಗಳಾಗಿದ್ದ ಮನೂ ಮತ್ತು ಆಭಾ, ಅವರನ್ನು ಅವಸರ ಮಾಡಿ ಎಬ್ಬಿಸಿ ಬಿರ್ಲಾಭವನದ ಹೊರಗಿನ ಹುಲ್ಲುಗಾವಲಿನ ಕಡೆ ನಡೆಸಿಕೊಂಡು ಹೊರಟರು. ಆಗ ಸಂಜೆ ಐದೂ ಕಾಲು. ಪ್ರಾರ್ಥನಾ ಸಭೆಗೆ ಜನ ಕಿಕ್ಕಿರಿದಿದ್ದರು. ಗಾಂಧಿ ವೇದಿಕೆ ಏರಲು ಇದ್ದ ಎರಡು ಸಣ್ಣ ಮೆಟ್ಟಿಲುಗಳ ಕಡೆ ಹೆಜ್ಜೆ ಹಾಕುತ್ತಿದ್ದಂತೆ ಖಾಕಿ ಷರಾಯಿ ತೊಟ್ಟಿದ್ದ ಓರ್ವ ಮಧ್ಯ ವಯಸ್ಸಿನ ವ್ಯಕ್ತಿ ಗಾಂಧೀಯವರಿಗೆ ನಮಸ್ಕರಿಸಲು ಪ್ರಯತ್ನಪಟ್ಟವನಂತೆ ಅವರ ಸಮೀಪಕ್ಕೆ ಬಂದ. ಈಗಾಗಲೇ ಪ್ರಾರ್ಥನೆಗೆ ತಡವಾಗಿದ್ದರಿಂದ ಅಭಾ ಆತನನ್ನು ದೂರು ಸರಿಸಲು ಯತ್ನಿಸಿದಾಗ ಆತ ಅವಳನ್ನು ನೂಕಿ ಗಾಂಧಿಯವರ ಎದುರಿಗೆ ನೇರ ನಿಂತ. ಗಾಬರಿಯಾದ ಆಭಾ ಸಾವರಿಸಿಕೊಂಡು ನೆಲಕ್ಕೆ ಬಿದ್ದಿದ್ದ ಗಾಂಧಿಯವರ ಟಿಪ್ಪಣಿ ಪುಸ್ತಕ, ಜಪಮಣಿಗಳನ್ನು ಎತ್ತಿಕೊಳ್ಳಲು ಬಾಗುತ್ತಿದ್ದಂತೆ ಆ ವ್ಯಕ್ತಿ ತನ್ನ ಬೊಗಸೆಯಲ್ಲಿ ಮರೆಮಾಡಿಕೊಂಡಿದ್ದ, ಪಿಸೂಲ್ತನ್ನು ತೆಗೆದು ಗಾಂಧಿಯವರ ಎದೆಗೆ ಗುರಿ ಇಟ್ಟು ಮೂರು ಗುಂಡುಗಳನ್ನು ಹಾರಿಸಿದ.

ಗಾಂಧಿ ಕ್ಷಣದಲ್ಲೇ 'ಹೇ- ರಾಮ್'! ಎಂದು ಎರಡು ಬಾರಿ ಕ್ಷಿಣ ದನಿಯಲ್ಲಿ ಉದ್ಗರಿಸುತ್ತಾ ನೆಲಕ್ಕೊರಗಿದರು. ಅವರ ಮೇಲುಹೊದಿಕೆಯೊಳಗಿಂದ ರಕ್ತ ನಿಧಾನವಾಗಿ ಜಿನುಗತೊಡಗಿತ್ತು. ಆಭಾ ಅವರ ತಲೆಯನ್ನೆತ್ತಿ ತನ್ನ ತೊಡೆ ಮೇಲಿಟ್ಟುಕೊಂಡಳು. ಒಂದೇ ಸಮನೆ ರೋಧಿಸತೊಡಗಿದಳು. ಗಾಂಧಿಯ ಹಿಂದೆ ಸದಾ ಇರುತ್ತಿದ್ದ ಅವರ ಟ್ಯಾಕ್ಸಿಯ ಚಾಲಕನೂ ಆಗಿ ಆತ್ಮೀಯ ಒಡನಾಡಿಯೂ ಆಗಿದ್ದ ಬ್ರಿಜ್ ಕೃಷ್ಣ



ಗಾಂಧಿ ಸ್ಮೃತಿ ಮ್ಯೂಸಿಯಂನಲ್ಲಿ ವಿದೇಶಿ ಪ್ರವಾಸಿಗರು .



ಚಂಡಿವಾಲ್ ಓಡೋಡಿ ಬಂದು ಅವರ ಇಡೀ ದೇಹವನ್ನು ಅಪ್ಪಿಕೊಂಡು ರೋಧಿಸತೊಡಗಿದ.

ಗಂಡಿನ ಸಪ್ಪಳ ಕೇಳಿ ಗಾಬರಿಯಾದ ಜನ ಅತ್ತಿಂದಿತ್ತ ಓಡತೊಡಗಿದರು. ಕೆಲವರು ಹಂತಕನು ತಪ್ಪಿಸಿಕೊಳ್ಳದಂತೆ ಅವನ ಮೇಲೆ ಮುಗಿಬಿದ್ದು ಹಿಡಿದು ಅವನನ್ನು ಪೊಲೀಸರಿಗೆ ಒಪ್ಪಿಸಿದರು.

ಸುದ್ದಿ ನಗರಾದ್ಯಂತ, ದೇಶಾದ್ಯಂತ, ಜಗತ್ತಿನಾದ್ಯಂತ ಬೆಂಕಿಯಂತೆ ಹರಡಿತು. ನೆಹರೂ, ಪಟೇಲ್, ಅಜ಼ಾದರು ಧಾವಿಸಿ ಬಂದರು. ಏನೂ ತೋಚದಂತಾಗಿದ್ದ ಅವರು ಶೂನ್ಯವನ್ನು ದಿಟ್ಟಿಸುತ್ತಾ ಕೂತರು. ಆ ಹೊತ್ತಿಗೆ ಗಾಂಧಿಯವರ ಪಾರ್ಥಿವ ಶರೀರವನ್ನು ಬಿರ್ಲಾಭವನದೊಳಕ್ಕೆ ತಂದು ರಕ್ತಸಿಕ್ತ ಬಟ್ಟೆಯನ್ನು ತೆಗೆದು ಶುಭ್ರ ವಸ್ತ್ರವೊಂದನ್ನು ತೊಡಿಸಿ ಬಿದಿರಿನ ತಡಿಕೆಯ ಮೇಲಿನ ಖಾದಿ ಹಾಸಿನ ಮೇಲೆ ಸಾರ್ವಜನಿಕ ದರ್ಶನಕ್ಕೆ ಇಡಲಾಯಿತು. ಕಿರಿಯ ಮಗ ದೇವದಾಸ ತಂದೆಯ ದೇಹವನ್ನು ಅಪ್ಪಿಕೊಂಡು, 'ಬಾಪು ಮಾತಾಡಿ, ನೀವೇಕೆ ಮಾತಾಡುತ್ತಿಲ್ಲ? ಬಾಪು ಮಾತಾಡಿ' ಎಂದು ರೋಧಿಸುವ ಧ್ವನಿ ಭವನವನ್ನು ತುಂಬಿಕೊಂಡಿತ್ತು.

ಬೆಳಗಿನ ಝಾವ ಎರಡು ಘಂಟೆಯ ಹೊತ್ತಿಗೆ ಬೃಜ್‌ಕೃಷ್ಣ, ಗಾಂಧಿಯವರ ದೇಹಕ್ಕೆ ಸ್ನಾನ ಮಾಡಿಸಿ ಕಳೆದ ಅಕ್ಟೋಬರ್ 2 ರಂದು ಗಾಂಧಿ ತಮ್ಮ ಹುಟ್ಟುಹಬ್ಬದ ಸಂದರ್ಭದಲ್ಲಿ ನೇಯ್ದಿದ್ದ ಖಾದಿ ವಸ್ತ್ರವನ್ನು ಅವರ ದೇಹಕ್ಕೆ ತೊಡಿಸಿದರು. ಕೊರಳಿಗೆ ಖಾದಿ ಹಾರ ಮತ್ತು ಅವರ ರಾಮನಾಮ ಜಪಮಣಿಯನ್ನು ತೊಡಿಸಿ ಹಣೆಗೆ ತಿಲಕವಿಟ್ಟರು. ಬೆಳಕು ಹರಿಯುವ ಮುನ್ನವೇ ಸಾವಿರಾರು ಜನ ಅಂತಿಮ ದರ್ಶನಕ್ಕಾಗಿ ಸಾಲುಗಟ್ಟಿ ನಿಂತಿದ್ದರು. ಗವರ್ನರ್ ಜನರಲ್, ಸೇನಾಪಡೆಯ ದಂಡನಾಯಕರು ಮತ್ತು ವಿವಿಧ ದೇಶಗಳ ರಾಯಭಾರಿಗಳು ಹಾಗೂ ಇತರ ಗಣ್ಯರು ಬಂದು ತಮ್ಮ ಶ್ರದ್ಧಾಂಜಲಿ ಸಲ್ಲಿಸಿದರು. ಸುಮಾರು ಮಧ್ಯಾಹ್ನ ಹನ್ನೊಂದೂವರೆ ಹೊತ್ತಿಗೆ ಪಾರ್ಥಿವ, ಶರೀರವನ್ನು ಅಲಂಕೃತ ಸೇನಾವಾಹನವೊಂದರಲ್ಲಿ ಇಡಲಾಯಿತು. ನೆಹರೂ ಪಟೇಲ್, ಕೃಪಲಾನಿ ಮತ್ತು ರಾಜ್‌ಕುಮಾರಿ ಅಮೃತಾ ಕೌರ್ ಶವವಾಹನವನ್ನು ಹತ್ತಿದರು. ಅಷ್ಟು ಹೊತ್ತಿಗೆ ಸರಿಯಾಗಿ ರಾವಲ್ಪಿಂಡಿಯಲ್ಲಿದ್ದ ಸುಶೀಲಾ ನಯ್ಯರ್ ದೆಹಲಿ ತಲುಪಿ ವಾಹನವೇರಿದರು. ಪಟೇಲ್ ಗಾಂಧಿಯವರ ದೇಹದ ಪಾದದ ಬಳಿ ತಲೆ ತಗ್ಗಿಸಿ ಕೂತಿದ್ದರೆ, ನೆಹರೂ ತಲೆಯ ಬಳಿ ತಲೆ ತಗ್ಗಿಸಿ ಕೂತಿದ್ದರು.

**ಜನಸಾಗರದ ಮಧ್ಯೆ ಅಂತಿಮ ಯಾತ್ರೆ – ಮೂಡಿದ ಹೊಸ ಬೆಳಕು**

31 ರ ಹನ್ನೊಂದು ಮುಕ್ಕಾಲರ ಹೊತ್ತಿಗೆ ಅಂತಿಮ ಶವಯಾತ್ರೆ ಹೊರಟಿತು. ಅದರ ಹಿಂದೆ 'ಮಹಾತ್ಮ ಗಾಂಧಿ ಕೀ ಜೈ' 'ಗಾಂಧೀಜಿ ಅಮರ್ ರಹೇಂ' ಎಂಬ ಮುಗಿಲುಮಟ್ಟುವ ಘೋಷಣೆಗಳನ್ನು ಕೂಗುತ್ತಾ ಜನಸಾಗರವೇ ಹೊರಟಿತು. ದಾರಿಯುದ್ದಕ್ಕೂ ಜನ ಸೇರಿಕೊಳ್ಳುತ್ತಾ ಹೊರಟಂತೆ ಮೆರವಣಿಗೆಯ ಉದ್ದ ಒಂದು ಮೈಲನ್ನೂ ಮೀರಿ ಬೆಳೆದಿತ್ತು. ವೈಸ್‌ರಾಯ್‌ಭವನದ ಸಮೀಪ ಹಾದುಹೋದ ಮೆರವಣಿಗೆ ಯುದ್ಧ ಸ್ಮಾರಕವಾದ ಇಂಡಿಯಾಗೇಟ್ ತಲುಪಿದಾಗ ಮೆರವಣಿಗೆಯಲ್ಲಿದ್ದ ಶೋಕತಪ್ತ ಜನರ ಸಂಖ್ಯೆ ಹತ್ತು ಲಕ್ಷವನ್ನು ಮೀರಿತ್ತೆಂದು ಮೆರವಣಿಗೆಯ ಉಸ್ತುವಾರಿ ವಹಿಸಿದ್ದ ಸೇನಾಧಿಕಾರಿಯೊಬ್ಬರ ಒಂದು ಅಂದಾಜಾಗಿತ್ತು. ಯಾತ್ರೆಯ ದಾರಿಯ ಇಕ್ಕೆಲಗಳಲ್ಲೂ ಜನ ಪಾರ್ಥಿವ ಶರೀರದ ಒಂದು ಇಟುಕುನೋಟವಾದರೂ ಸಿಗಬಹುದೆಂದು, ಸಾಧ್ಯವಿರುವ ಕಟ್ಟಡಗಳ ಮೇಲೆ ಮರಗಳ ಮೇಲೆ ಜಮಾಯಿಸಿತ್ತು.

**(ಡಿ ಎಸ್ ನಾಗಭೂಷಣ್ ಅವರ ಗಾಂಧಿ ಕಥನ ಕೃತಿಯಿಂದ ಆಯ್ದ ಭಾಗ)**

■






ಗಾಂಧೀಜಿಯವರ ಕುರಿತಾಗಿ ಅನೇಕ ರೀತಿಯಲ್ಲಿ ಅವರ ಚಾರಿತ್ರ್ಯ ಹನನದ ಮತ್ತು ತಪ್ಪಾಗಿ ಅರ್ಥೈಸಿ ವಿವರಿಸುವ ಪ್ರಕ್ರಿಯೆಗಳು ನಡೆಯುತ್ತಿರುವ ಹಿನ್ನೆಲೆಯಲ್ಲಿ ಗಾಂಧಿ ವಿಚಾರ ವೇದಿಕೆಯು ರೂಪಿಸಿದ ಪರಿಕಲ್ಪನೆಯನ್ನು ಶ್ರೀ ಎಮ್. ಜಿ. ಹೆಗಡೆಯವರು ಇಲ್ಲಿ ಸಾಕಾರಗೊಳಿಸಿದ್ದಾರೆ. ಈ ಪುಸ್ತಕವು ಗಾಂಧೀಜಿಯವರ ಮೇಲಿನ ಹಲವು ತಪ್ಪು ತಿಳಿವಳಿಕೆಗಳ ಪ್ರಶ್ನೆಗಳಿಗೆ ಉತ್ತರ ರೂಪದಲ್ಲಿದೆ.

ವ್ಯಕ್ತಿ ಯಾರೇ ಇರಬಹುದು. ಅವರನ್ನು ಅವರ ಕಾಲಮಾನದ ಸಮಗ್ರ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗುತ್ತದೆ. ಸ್ವತಃ ಗಾಂಧೀಜಿಯೂ ಕೂಡ ನೂರು ವರ್ಷಗಳ ಹಿಂದೆ ಬಂದಿದ್ದರೆ ಯಶಸ್ವಿಯಾಗುತ್ತಿದ್ದರು ಎಂದೇ ಹೇಳುವಂತಿಲ್ಲ. ಭಾರತದಲ್ಲಿ ಗಾಂಧೀಜಿ ಪ್ರವೇಶಿಸುವಾಗಿನ ಹಿನ್ನೆಲೆಗಳನ್ನು ನೋಡಬೇಕು.

* ಬ್ರಿಟಿಷರು ಅವರ ಯುರೋಪಿಯನ್ ಎದುರಾಳಿಗಳನ್ನೂ, ಸಶಸ್ತ್ರ ಹೋರಾಟಕ್ಕಿಳಿದ ದೇಶೀಯ ರಾಜರುಗಳು ಮತ್ತು ಬಂಡಾಯಗಾರರನ್ನು ಹುಟ್ಟಡಗಿಸಿ ಆಗಿತ್ತು.
* ಬ್ರಿಟಿಷರೊಂದಿಗೆ ಸಾಂವಿಧಾನಿಕ ರೀತಿಯ ಉಪಕ್ರಮಗಳನ್ನು ಮಾಡಲು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಹುಟ್ಟಿಕೊಂಡು ಮನವಿಗಳು ಉಪಯೋಗವಾಗುವುದಿಲ್ಲವೆಂದು ತಿಳಿದು, ವಂಗ-ಭಂಗ ಚಳವಳಿಯಲ್ಲಿ ಪ್ರತಿಭಟನಾತ್ಮಕ ಹೋರಾಟವನ್ನೂ ಮಾಡಿ ಆಗಿತ್ತು. ಹಲವು ಪ್ರಯೋಗಗಳನ್ನು ನಡೆಸಿದ್ದ ಕಾಂಗ್ರೆಸ್ "ಇನ್ನೇನು ಮಾಡುವುದು?" ಎಂಬ ಸ್ಥಿತಿಯಲ್ಲಿದ್ದಾಗ ತಮ್ಮ ದಕ್ಷಿಣ ಆಫ್ರಿಕಾದ ಅನುಭವಗಳ ಆಧಾರದಲ್ಲಿ ಗಾಂಧಿ ಸ್ಪಷ್ಟ ಮಾರ್ಗದರ್ಶನವನ್ನು ನೀಡಿದರು.
* 1835 ರ ಸುಮಾರಿಗೆ ಭಾರತಕ್ಕೆ ಬಂದ ಗವರ್ನರ್ ಜನರಲ್ ವಿಲಿಯಂ ಕ್ಯಾವೆಂಡೀಶ್ ಬೆಂಟಿಂಕ್ ಭಾರತವನ್ನು ನಾಗರಿಕ ರಾಷ್ಟ್ರವಾಗಿ ಸುಧಾರಣೆ ಮಾಡುವುದು ತನ್ನ ಕರ್ತವ್ಯ ಎಂದು ತಿಳಿದಿದ್ದರು. ತಾವು ನಾಗರಿಕರು, ತಮ್ಮ ವಸಾಹತುಗಳ ಜನರು ಅನಾಗರಿಕರು, ಅವರನ್ನು ನಾಗರಿಕರನ್ನಾಗಿ ಮಾಡುವುದು ತಮ್ಮ ಕರ್ತವ್ಯ ಎಂಬ ಭಾವನೆ ಬ್ರಿಟಿಷರಲ್ಲಿತ್ತು. ಇದನ್ನು 'ವೈಟ್ ಮೆನ್ ಬರ್ಡನ್' ಎಂದು ಕರೆಯುತ್ತಾರೆ. ಇದೊಂದು ಥರಾ," ಮಕ್ಕಳು ತಪ್ಪು ಮಾಡುತ್ತಾರೆ. ಹಿರಿಯರು ಸಹಿಸಿಕೊಂಡು ಮಕ್ಕಳಿಗೆ ಒಳ್ಳೆಯದನ್ನು ಕಲಿಸಬೇಕು ಎಂದ ಹಾಗೆ. ಆದರೆ ಬ್ರಿಟಿಷರ ಈ ಮನೋಭಾವನೆಯು ಅವರಲ್ಲಿ ನಿರಾಯುಧರ ಮೇಲೆ ಶಸ್ತ್ರ ಪ್ರಯೋಗ ಮಾಡಿದರೆ ತಾವು ಕೀಳಾಗುತ್ತೇವೆ ಎಂಬ ಬ್ರಿಟಿಷರ ಒಟ್ಟಾರೆ ನಿಲುವಿಗೂ ಕಾರಣವಾಗಿತ್ತು. ಸತ್ಯಾಗ್ರಹ ಹೋರಾಟವನ್ನು ಈ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

ಪ್ರಾರಂಭದಲ್ಲಿ ಬ್ರಿಟಿಷರಿಗೆ ಎದುರಾಳಿಗಳಾಗಿದ್ದ ಬಹುತೇಕರು ಮುಸ್ಲಿಂ ಆಳರಸರು. ಆಗ ಹಿಂದೂಗಳಿಗೆ ಮುಸ್ಲಿಮರ ಮೇಲೆ ಅವಿಶ್ವಾಸ ಹುಟ್ಟಿಸುವ ವ್ಯವಸ್ಥಿತ ಪ್ರಮೇಯಗಳನ್ನು ಬ್ರಿಟಿಷರು ರೂಪಿಸಿದ್ದರು. ಎರಡನೆಯ ಹಂತದಲ್ಲಿ ಹಿಂದೂ ಮೇಲು ಜಾತಿಗಳು ಬ್ರಿಟಿಷರ ವಿರುದ್ಧವಾದವು. ಆಗ ದುರ್ಬಲ ಜಾತಿಗಳ ಮೇಲಿನ ದೌರ್ಜನ್ಯದ ಒಂದು ಪ್ರಮೇಯವನ್ನು ವ್ಯವಸ್ಥಿತವಾಗಿ ಸಂಘಟಿಸುವುದರೊಂದಿಗೆ ಹಿಂದೂ ಬಹುಸಂಖ್ಯಾತರು ಮುಸ್ಲಿಂ ಅಲ್ಪಸಂಖ್ಯಾತರಿಗೆ ಮಾರಕರಾಗಲಿದ್ದಾರೆ ಎಂಬ ಪ್ರಮೇಯವನ್ನು ಬೆಳೆಸಿದರು. ಇದರರ್ಥ ಇತಿಹಾಸದಲ್ಲಿ ಮುಸ್ಲಿಂ ಅರಸರು ಹಿಂದೂಗಳ ಮೇಲೆ, ಮೇಲು ಜಾತಿಗಳು ದುರ್ಬಲ ಜಾತಿಗಳ ಮೇಲೆ ದೌರ್ಜನ್ಯ ನಡೆಸಿಲ್ಲವೆಂದಲ್ಲ. ಆದರದು ಸಾಂದರ್ಭಿಕ/ ಸಾಂಪ್ರದಾಯಿಕ ಸ್ವರೂಪದ್ದಾಗಿತ್ತೇ ಹೊರತು ಜನಾಂಗೀಯ ದ್ವೇಷದ ವ್ಯವಸ್ಥಿತ ಸಿದ್ಧಾಂತವಾಗಿ ಅಲ್ಲ. ಬ್ರಿಟಿಷರು ಅದನ್ನು ವ್ಯವಸ್ಥಿತ ಸಿದ್ಧಾಂತವಾಗಿ ನಿರೂಪಿಸಿದರು. ಜೊತೆಗೆ ಮೇಲು ಜಾತಿಯವರಿಗೆ ಹುದ್ದೆಗಳನ್ನು ಕೊಟ್ಟು ತಮ್ಮೊಂದಿಗಿರಿಸಿಕೊಳ್ಳುವುದು, ದುರ್ಬಲ ಜಾತಿಯವರಿಗೂ ಹುದ್ದೆಗಳನ್ನು ಕೊಟ್ಟು ತಮ್ಮೊಂದಿಗಿರಿಸಿಕೊಳ್ಳುವುದನ್ನೂ ಮಾಡಿದ್ದರು. ಒಟ್ಟಿನಲ್ಲಿ ಭಾರತೀಯರು ಪರಸ್ಪರ ಕಚ್ಚಾಡುತ್ತಾ ಪರಿಹಾರಕ್ಕಾಗಿ ಬ್ರಿಟಿಷರನ್ನು ಅವಲಂಬಿಸುವಂತೆ ಮಾಡುವ ವ್ಯವಸ್ಥೆಯನ್ನು ರಚಿಸಿದ್ದರು. ಇಂತಹ ವ್ಯವಸ್ಥೆಯಲ್ಲಿ ಸಂಪರ್ಕ ಮಾಧ್ಯಮಗಳೆಲ್ಲ ದುರ್ಬಲವಿದ್ದಾಗ ಇಡೀ ಭಾರತದಲ್ಲಿ ಹಿಂದೂ–ಮುಸ್ಲಿಂ, ಪ್ರಬಲ ಜಾತಿ–ದುರ್ಬಲ ಜಾತಿಗಳ ನಡುವೆ ಸಮನ್ವಯವನ್ನು ತರುವ ಅವಶ್ಯಕತೆ ಗಾಂಧೀಜಿಗಿತ್ತು.

* ಬ್ರಿಟಿಷರ ತೆರಿಗೆ ನೀತಿಯು ಶೇಕಡ ಅರವತ್ತರಷ್ಟು ತೆರಿಗೆ ಮತ್ತು ಇತರೇ ಸುಂಕಗಳು ಸೇರಿ ಭಾರತವನ್ನು ಕಡು ಬಡತನಕ್ಕೆ ತಳ್ಳಿತ್ತು. ಆಡಂ ಸ್ಮಿತ್ ಎಂಬ ಅರ್ಥಶಾಸ್ತ್ರಜ್ಞ ಬ್ರಿಟಿಷರನ್ನು ಭಾರತದ ವಿಧ್ವಂಸಕರು ಎಂದೇ ಕರೆದಿದ್ದಾರೆ. ಆರ್ಥಿಕ ಅಧಃಪತನದ ಪರಿಣಾಮವಾಗಿ ಬರುವ ಅಸ್ವಚ್ಛತೆ, ಅನಕ್ಷರತೆ, ಕಳ್ಳತನ, ಮೂಢನಂಬಿಕೆ, ಕೆಟ್ಟ ಸಾಮಾಜಿಕ ಪದ್ಧತಿಗಳು ಇವೆಲ್ಲದರಿಂದ ಭಾರತೀಯರನ್ನು ಹೊರ ತರಬೇಕಾಗಿತ್ತು. ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಸುಧಾರಣೆಗಳು ಆ ಕಾಲಮಾನದ ಅಗತ್ಯಗಳಾಗಿದ್ದವು. ಹಾಗಿರುವಾಗ ಕೇವಲ ರಾಜಕೀಯ ನೆಲೆಯಲ್ಲಿ ಮಾತ್ರವೇ ಗಾಂಧೀಜಿಯವರನ್ನು ಪ್ರಶ್ನಿಸಲು ಬರುವುದಿಲ್ಲ.

* ಅವಶ್ಯವಾಗಿ ಗಾಂಧೀಜಿ ಅಂದಿನ ಭಾರತದ ನಾಯಕರಾಗಿದ್ದರು. ಜವಾಬ್ದಾರಿ ಅವರದೆ ಆಗಿತ್ತು. ಆದರೆ ಅವರ ಬಳಿ ಯಾವ ಅಧಿಕಾರವೂ ಇರಲಿಲ್ಲ. ಅಧಿಕಾರಗಳೆಲ್ಲವೂ ಬ್ರಿಟಿಷರ ಬಳಿ ಇತ್ತು ಅರಿವು ಇರಬೇಕಾಗುತ್ತದೆ.

ಗಾಂಧಿ ವಿರೋಧಿಗಳು ಯಾರು ಎಂಬುದನ್ನು ವಿಶಾಲ ವ್ಯಾಪ್ತಿಯಲ್ಲಿ ಹೀಗೆ ಗುರುತಿಸಬಹುದೇನೊ:

- **ಪರ ಧರ್ಮ ಅಸಹಿಷ್ಣುಗಳು**
- **ಜಾತಿ ಅಸಮಾನತೆಯ ಬೆಂಬಲಿಗರು**
- **ದುಡಿಯದೆ ಬಾಳುವವರು**
- **ಅಪ್ರಮಾಣಿಕರು**
- **ಸ್ವಜನ ಪಕ್ಷಪಾತಿಗಳು**
- **ಗೌಪ್ಯ ಯೋಜನೆಗಳುಳ್ಳವರು**
- **ಯೋಚಿಸದೆ, ಇನ್ನೊಬ್ಬರನ್ನು ನಂಬುವ ಮುಗ್ಧರು**

ಇವರಲ್ಲಿ ಕೊನೆಯವರು ಅವರಲ್ಲಿ ವಿಚಾರಶೀಲತೆ ಹುಟ್ಟಿದಾಗ ಬದಲಾಗಬಲ್ಲರು.

ಇದನ್ನೆಲ್ಲ ಗಮನದಲ್ಲಿರಿಸಿಕೊಂಡು ಎಮ್. ಜಿ. ಹೆಗಡೆಯವರು ಕೃತಿಯನ್ನು ರಚಿಸಿದ್ದಾರೆ. ನಾನಾಗಿದ್ದರೆ ಉತ್ತರಿಸಲು ನಿರಾಕರಿಸುತ್ತಿದ್ದ ಪ್ರಶ್ನೆಗಳಿಗೂ ಉತ್ತರಿಸಲು ಪ್ರಯತ್ನಿಸಿದ್ದಾರೆ. ಉದಾಹರಣೆಗೆ ಗೋಡ್ಸೆಗೆ ಸಂಬಂಧಿಸಿದ ವಿವರಗಳು ನನ್ನ ದೃಷ್ಟಿಯಲ್ಲಿ ಅಪ್ರಸ್ತುತ. ಗಾಂಧಿ ಹತ್ಯೆಯಲ್ಲಿ ಸಾವರ್ಕರ್ ಅವರ ಹೆಸರು ಕೇಳಿ ಬಂದಿದ್ದರೂ ಸಾಕ್ಷಿ ಇಲ್ಲವೆಂದು ನ್ಯಾಯಾಲಯವು ಸಾವರ್ಕರ್‌ರನ್ನು ಬಿಡುಗಡೆ ಮಾಡಿದೆ. ಅಂದಿನ ಕಾಲದ ಅನುಭವವಿಲ್ಲದ ನಾವು ನ್ಯಾಯಾಲಯದ ತೀರ್ಪಿನ ಆಧಾರದಲ್ಲಿ ಸಾವರ್ಕರ್ ದೋಷಿ ಅಲ್ಲ ಎಂದೇ ತೆಗೆದುಕೊಳ್ಳಬೇಕಾಗುತ್ತದೆ. ಆದರೆ ಅದೇ ನ್ಯಾಯಾಲಯ ಗೋಡ್ಸೆಯನ್ನು ಅಪರಾಧಿ ಎಂದು ಘೋಷಿಸಿದೆ. ತನ್ನೆಲ್ಲ ವಿಚಾರವನ್ನು ನ್ಯಾಯಾಲಯಕ್ಕೆ ತಿಳಿಸಿದ ನಂತರವೂ, ನ್ಯಾಯಾಲಯ ಗೋಡ್ಸೆಯನ್ನು ಅಪರಾಧಿ ಎಂದ ಮೇಲೆ ಗೋಡ್ಸೆಯ ವಾದ ಹುರುಳಿಲ್ಲದ್ದು ಎಂದು ತೆಗೆದುಕೊಳ್ಳಬೇಕಾಗುತ್ತದೆ. ಅಪರಾಧಿಯ ಹೇಳಿಕೆಯನ್ನು ಪರಿಗಣಿಸುತ್ತಾ ಹೋದರೆ ಜಗತ್ತಿನ ಎಲ್ಲ ಅಪರಾಧಿಗಳಿಗೂ ಅವರ ದೃಷ್ಟಿಯಲ್ಲಿ ಅವರದ್ದು ಸರಿ ಎಂದು ಅನಿಸಿರುತ್ತದೆ. ಸರಿ ಎಂದು ಅನಿಸದೆ ಇದ್ದರೆ ಅವರು ಅಪರಾಧವನ್ನೆ ಮಾಡುತ್ತಿರಲಿಲ್ಲ. ಹಾಗೆಯೇ ಗೋಡ್ಸೆಯೂ ಕೂಡ. ಆದ್ದರಿಂದ ಗೋಡ್ಸೆಯ ಹೇಳಿಕೆಯಾಗಲಿ, ಆ ಹೇಳಿಕೆಯನ್ನು ಆಧರಿಸಿ ಬಂದ ಪುಸ್ತಕಗಳಾಗಲಿ ಪರಿಗಣನೆಗೇ ಅರ್ಹವಲ್ಲ. ಅದೇ ರೀತಿ ಗಾಂಧೀಜಿಯ ಮೇಲಿನ ಖಾಸಗಿ ವಿಚಾರಗಳೂ ಉತ್ತರಕ್ಕೆ ಅರ್ಹವಲ್ಲ. ತನ್ನ ತಂದೆ ಸಾವಿನ ದವಡೆಯಲ್ಲಿದ್ದಾಗ ತಾನು ಕಾಮುಕತನದಲ್ಲಿ ನಿರತನಾಗಿದ್ದೆ ಎಂದು ಮುಕ್ತವಾಗಿ ಹೇಳಿದ ಗಾಂಧಿ ಯಾವುದೊ ಗುಟ್ಟು ಇಟ್ಟುಕೊಂಡಿರಬಹುದು ಎಂದು ಯೋಚಿಸುವವರ ಯೋಚನಾ ಕ್ರಮವೇ ಸರಿ ಇಲ್ಲ. ಆದ್ದರಿಂದ ಅಂತಹ ಪ್ರಶ್ನೆಗಳು ಉತ್ತರಕ್ಕೆ ಅನರ್ಹ ಪ್ರಶ್ನೆಗಳಾಗಿವೆ. ಗಾಂಧೀಜಿಯ ಮಗ ಹರಿಲಾಲ್ ಗಾಂಧಿಯವರ ಅನೈತಿಕತೆಯ ಕುರಿತ ಪ್ರಶ್ನೆಗಳೂ ಉತ್ತರಕ್ಕೆ ಅನರ್ಹ. ಹರಿಲಾಲ್ ಗಾಂಧಿ ನೀತಿವಂತನಲ್ಲ ಎನಿಸುವುದು ಅವರನ್ನು ಮಹಾತ್ಮಾ ಗಾಂಧಿಯ ಮುಂದೆ ಹೋಲಿಸಿದಾಗ ಮಾತ್ರ. ವರ್ತಮಾನದ ಸಮಾಜದಲ್ಲಿರುವ ಹಲವು ಅನೀತಿವಂತರಿಗೆ ಹೋಲಿಸಿದರೆ ಹರಿಲಾಲ್ ಗಾಂಧಿ ಮಹಾ ಯೋಗ್ಯರೂ, ನೀತಿವಂತರೂ ಆಗಿದ್ದರು. ಮಹಾತ್ಮಾ ಗಾಂಧಿಯವರ ಚಿತೆಗೆ ಅಗ್ನಿ ಸ್ಪರ್ಶ ಮಾಡಲು ಹರಿಲಾಲ್ ಗಾಂಧಿ ಹೋಗಲಿಲ್ಲ. ಏಕೆಂದರೆ ಅದಕ್ಕೆ ತಾನು ಅನರ್ಹ ಎಂಬ ಆತ್ಮಸಾಕ್ಷಿ ಅವರಿಗಿತ್ತು. ಆ ಮಟ್ಟಿಗೆ ಹರಿಲಾಲ್ ಗಾಂಧಿ ಯೋಗ್ಯರೇ ಆಗಿದ್ದರು.

ಇದೆಲ್ಲವನ್ನೂ ಗಮನಿಸಿ ಪುಸ್ತಕದ ಸಮಗ್ರ ಹಿನ್ನೆಲೆಯಲ್ಲಿರುವ ಪ್ರಶ್ನೆಗಳಿಗೆ

ನನ್ನ ಉತ್ತರ ರೂಪಿ ಸಂಕ್ಷಿಪ್ತ ಟಿಪ್ಪಣಿ ಹೀಗಿದೆ:

**ಪ್ರಶ್ನೆ: ಚರಕವು ಹೇಗೆ ಸ್ವಾತಂತ್ರ್ಯ ಹೋರಾಟಕ್ಕೆ ಪೂರಕವಾಯಿತು?**

**ಉತ್ತರ:** ಬ್ರಿಟಿಷರ ಜವುಳಿ ಉದ್ಯಮವನ್ನು ನಡೆಸಲು ಭಾರತ ಹುಲುಸಾಗಿತ್ತು. ಚರಕ ಚಳವಳಿಯಿಂದಾಗಿ ಅವರವರ ಬಟ್ಟೆಯನ್ನು ಅವರೇ ತಯಾರಿಸಿದರು. ಆಗ ಬ್ರಿಟಿಷರು ಬ್ರಿಟನ್ ನಿಂದ ತರುವ ಬಟ್ಟೆಗಳನ್ನು ಕೊಂಡುಕೊಳ್ಳುವವರ ಸಂಖ್ಯೆ ಕಡಿಮೆಯಾಯಿತು. ಬ್ರಿಟಿಷರ ಆದಾಯ

ಕಡಿಮೆಯಾಯಿತು. ಇದಕ್ಕೆ ಸಾಕ್ಷಿಯಾಗಿ ಗಾಂಧೀಜಿ ಬ್ರಿಟನ್ನಿಗೆ ಹೋದಾಗ ಅಲ್ಲಿನ ಜವುಳಿ ಉದ್ಯಮ ಕುಸಿದು ಅಲ್ಲಿನ ಗಿರಣಿ ಕಾರ್ಮಿಕರು ಗಾಂಧೀಜಿಯ ವಿರುದ್ಧ ಪ್ರತಿಭಟನೆ ಮಾಡಿದ್ದರು. ಭಾರತದಲ್ಲಿ ಬ್ರಿಟಿಷರ ಆರ್ಥಿಕ ಶಕ್ತಿ ಕುಸಿಯಲು ಚರಕ ಚಳವಳಿಯೂ ಕಾರಣವಾಯಿತು.

**ಪ್ರಶ್ನೆ: ಗಾಂಧೀಜಿ ಮಹಿಳೆಯರ ಪರ ಇದ್ದರೇ?**

**ಉತ್ತರ:** ಇದ್ದರು. ಉದಾಹರಣೆಗೆ ಒಬ್ಬ ಮಹಿಳೆ ನಿಮ್ಮ ಗಂಡನಿಗೆ ಹೇಳಿ ಸೀರೆ ಕೊಡಿಸಿ ಎಂದು ಕಸ್ತೂರ್ಬಾ ಅವರಲ್ಲಿ ಚಂಪಾರಣ್ ಸತ್ಯಾಗ್ರಹ ಸಮಯದಲ್ಲಿ ಕೇಳಿದಾಗ, ಗಾಂಧೀಜಿ ಆಕೆಗೆ ಸೀರೆ ತಯಾರಿಸುವುದನ್ನು ಕಲಿಸಿದರು. ಗಾಂಧೀಜಿಯ ವೃತ್ತಿ ತರಬೇತಿಗಳು ಮಹಿಳಾ ಸ್ವಾವಲಂಬನೆಯ ಪರವಾಗಿವೆ.

**ಪ್ರಶ್ನೆ: ಮಹಿಳಾ ಸಮಾನತೆಯ ವಿಷಯದಲ್ಲಿ ಗಾಂಧೀಜಿಯವರ ಚಿಂತನೆಗಳು ಹೇಗಿದ್ದವು?**

**ಉತ್ತರ:** ಗಾಂಧೀಜಿಯವರ ಚಿಂತನೆಗಳು ಮಹಿಳೆಯರ ಅಭ್ಯುದಯದ ಪರ ಇವೆ. ಆದರೆ ಇಂದಿನ ಅರ್ಥದ ಮಹಿಳಾ ಸಮಾನತೆ ಗಾಂಧಿ ಚಿಂತನೆಯಲ್ಲಿಲ್ಲ. ಗಾಂಧೀಜಿ ಮಹಿಳೆಯರನ್ನು ಆದರ್ಶ ಭಾರತೀಯ ನಾರಿಯ ಸಾಂಪ್ರದಾಯಿಕ ನೆಲೆಯಲ್ಲಿ ನೋಡುತ್ತಾರೆ.

**ಪ್ರಶ್ನೆ: ಗಾಂಧೀಜಿಯವರಲ್ಲಿ ವೈರುಧ್ಯಗಳಿರಲಿಲ್ಲವೆ?**

**ಉತ್ತರ:** ಇದ್ದವು.

**ಪ್ರಶ್ನೆ: ಗಾಂಧೀಜಿಯ ವೈರುಧ್ಯಗಳನ್ನು ಹೇಗೆ ಹೇಳುವಿರಿ?**

**ಉತ್ತರ:** ಗಾಂಧೀಜಿ ರೈಲು ಪ್ರಯಾಣವನ್ನು ವಿರೋಧಿಸಿದರು. ಆದರೆ ಯಾರೂ ಮಾಡದಷ್ಟು ರೈಲು ಪ್ರಯಾಣವನ್ನು ಅವರೇ ಮಾಡಿದರು.

ಗಾಂಧೀಜಿ ಅಂಚೆ ಸಂಪರ್ಕವನ್ನು ವಿರೋಧಿಸಿದ್ದರು. ಆದರೆ ಸ್ವತಃ ಅವರೇ ಸುಮಾರು ಎಂಬತ್ತು ಸಾವಿರದಷ್ಟು ಪತ್ರಗಳನ್ನು ಬರೆದರು. ಇಂತಹ ವೈರುಧ್ಯಗಳನ್ನು ಕಾಣಬಹುದು.

**ಪ್ರಶ್ನೆ: ಗಾಂಧಿ ಹಿಂದೂ ವಿರೋಧಿಯೇ?**

**ಉತ್ತರ:** ಅಲ್ಲ.

**ಪ್ರಶ್ನೆ: ಗಾಂಧಿ ಮತ್ತು ಸಾವರ್ಕರ್ ಇಬ್ಬರನ್ನು ಹೇಗೆ ಗ್ರಹಿಸಬೇಕು?**

**ಉತ್ತರ:** ಗಾಂಧಿ ಆಸ್ತಿಕರು. ಅಂದರೆ



ದೇವರನ್ನು ನಂಬಿದವರು. ಸಾವರ್ಕರ್ ನಾಸ್ತಿಕರು. ದೇವರನ್ನು ನಂಬದವರು. ಸಾವರ್ಕರ್ ಅವರ ಸಿದ್ಧಾಂತ ರಾಜಕೀಯಾತ್ಮಕವಾಗಿದ್ದು ಹಿಂದೂಗಳನ್ನು ಪ್ರತಿನಿಧಿಸುವ ರಾಜಕೀಯ ಶಕ್ತಿಗೆ ಹಿಂದೂಗಳು ನಿಷ್ಠರಾಗಿರುವುದನ್ನು ಬಯಸುತ್ತದೆ. ಗಾಂಧೀಜಿಯವರ ಸಿದ್ಧಾಂತ ಹೊಸ ಸಿದ್ಧಾಂತವಲ್ಲ. ಸುಮಾರು ನಾಲ್ಕು ಸಾವಿರ ವರ್ಷಗಳಿಂದ ನಡೆದು ಬಂದ ಸನಾತನ ಧರ್ಮದ ನಂಬಿಕೆಗಳೇ ಗಾಂಧೀಜಿಯ ಸಿದ್ಧಾಂತ. ಸಾವರ್ಕರ್ ಸಿದ್ಧಾಂತದಲ್ಲಿ ಹಿಂದೂ ರಾಜಕೀಯ ಶಕ್ತಿಯು ಭಾರತವನ್ನು ಆಳುತ್ತದೆ. ಗಾಂಧೀಜಿಯ ಸಿದ್ಧಾಂತದಲ್ಲಿ ಹಿಂದೂಗಳೂ, ಹಿಂದೂಗಳಲ್ಲದವರೂ ಒಟ್ಟಾಗಿಯೇ ಭಾರತವನ್ನು ಆಳುತ್ತಾರೆ.

ಇಲ್ಲಿನ ಮಹತ್ವದ ಇನ್ನೊಂದು ಅಂಶವೆಂದರೆ ಸಾವರ್ಕರ್ ರಾಜಕೀಯ ಸಿದ್ಧಾಂತಿ. ಆದರೆ ಆರ್ಥಿಕ, ಸಾಂಸ್ಕೃತಿಕ, ಕೌಟುಂಬಿಕ, ಶೈಕ್ಷಣಿಕ ವಿಷಯಗಳಲ್ಲಿ ಅವರ ಚಿಂತನೆಗಳಿಲ್ಲ. ಆದರೆ ಗಾಂಧೀಜಿ ಎಲ್ಲ ವಿಷಯಗಳನ್ನೂ ಯೋಚಿಸಿ ವಿವರಿಸಿದವರು. ಮತ್ತು ವಾಸ್ತವದಲ್ಲಿ ಕೆಲಸ ಮಾಡಿದವರು. ಸಾವರ್ಕರ್ ರಾಷ್ಟ್ರೀಯ ಸನ್ನಿವೇಶವನ್ನು ನಿಭಾಯಿಸಿದವರಲ್ಲ.ಇವೆರಡನ್ನೂ ಇರಿಸಿಕೊಂಡೇ ಇಬ್ಬರನ್ನೂ ನೋಡಬೇಕು.

**ಪ್ರಶ್ನೆ: ಗಾಂಧೀಜಿಯವರು ಹಿಂಸೆಯನ್ನು ಬೋಧಿಸುವ ಭಗವದ್ಗೀತೆಯನ್ನು ತಾಯಿ ಎಂದು ಹೇಗೆ ಒಪ್ಪಿಕೊಂಡರು?**

**ಉತ್ತರ:** ಆಚಾರ್ಯ ರಜನೀಶರು ಇದೇ ಪ್ರಶ್ನೆಯನ್ನು ಗಾಂಧೀಜಿಗೆ ಕೇಳಿದ್ದಾಗ ಗಾಂಧೀಜಿ," ಭಗವದ್ಗೀತೆಯು ಯುದ್ಧ ಬೋಧನೆಗಿಂತ ಒಬ್ಬ ಮನುಷ್ಯನ ಅಂತರಂಗದ ತಾಕಲಾಟ ಮತ್ತು ಗೊಂದಲಗಳನ್ನು ಹೇಳುತ್ತದೆ. ಭಗವಂತನಾದ ಕೃಷ್ಣನನ್ನೂ ಮಾಯೆ ಆವರಿಸಿ ಹಿಂಸೆಗಿಳಿಯಲು ಸಾಧ್ಯ ಎಂಬುದನ್ನು ತಿಳಿಸುತ್ತದೆ. ಅರ್ಜುನನ್ನು ಆವರಿಸಿದ್ದು ಭೀಷ್ಮ, ದ್ರೋಣ, ದುರ್ಯೋಧನರೆಲ್ಲ ತನ್ನವರು ಎಂಬ ಮೋಹ. ಕರ್ಮಯೋಗಿಗೆ ಮೋಹ ಇರಬಾರದು. ಒಂದು ವೇಳೆ ಅರ್ಜುನ ಸಾಮಾನ್ಯ ಸೈನಿಕರೆಲ್ಲ ಹತರಾಗುತ್ತಾರಲ್ಲ ಎಂಬ ಆತಂಕವನ್ನು ವ್ಯಕ್ತಪಡಿಸಿದ್ದರೆ ಕೃಷ್ಣ ಕೊಡುವ ಉತ್ತರ  ಬೇರಯಾಗಿರುತ್ತಿತ್ತು" ಎಂದು ಉತ್ತರಿಸಿದ್ದಾರೆ.

**ಪ್ರಶ್ನೆ: ಗಾಂಧೀಜಿಯವರ ಅಹಿಂಸೆಯಿಂದ ಭಾರತೀಯರ ಕ್ಷಾತ್ರ ತೇಜಸ್ಸು ಹಿನ್ನಡೆಯಲಿಲ್ಲವೆ?**

**ಉತ್ತರ:** ಇಲ್ಲ. ಕೇವಲ ಕ್ಷಾತ್ರ ಹೋರಾಟದಿಂದ ಸ್ವಾತಂತ್ರ್ಯ ಬರುವುದಾದರೆ, ಗಾಂಧೀಜಿ ಹುಟ್ಟುವ ಮೊದಲೇ ಬ್ರಿಟಿಷರ ವಿರುದ್ಧ ನಡೆದ ಹಿಂಸಾತ್ಮಕ ಯುದ್ಧಗಳಿಂದ ಸ್ವಾತಂತ್ರ್ಯ ಬರಬೇಕಾಗಿತ್ತು.

**ಪ್ರಶ್ನೆ: ಸ್ವಾತಂತ್ರ್ಯ ಹೋರಾಟದಲ್ಲಿ ಅಹಿಂಸೆಯ ಮಹತ್ವ ಏನು?**

**ಉತ್ತರ:** ಗಾಂಧೀಜಿಗೆ ಅಹಿಂಸೆಯು ಧರ್ಮ. ನೆಹರೂ ಅವರಿಗೆ ಅಹಿಂಸೆಯು ಕೇವಲ ನೀತಿಯಷ್ಟೆ. ಸಣ್ಣ ದೇಶಗಳಲ್ಲಿ ಗೌಪ್ಯ ಸಂಘಟನೆ ಸಾಧ್ಯವಿದೆ. ಭಾರತದಂಥ ದೊಡ್ಡ ದೇಶದಲ್ಲಿ ಗೌಪ್ಯ ವಾಗಿ ಜನ ಸಂಘಟನೆಯ ವಿಚಾರ

ಪ್ರಸಾರ ಮಾಡುವುದು ಕಷ್ಟ. ಹಿಂಸಾತ್ಮಕ ಹೋರಾಟದ ಪ್ರಚಾರವನ್ನು ಗೌಪ್ಯವಾಗಿ ಮಾಡಲು ಸಾಧ್ಯವಿಲ್ಲದಷ್ಟು ದೊಡ್ಡ ದೇಶದಲ್ಲಿ ಹಿಂಸಾತ್ಮಕ ಹೋರಾಟದ ಪ್ರಚಾರವನ್ನು ಬಹಿರಂಗವಾಗಿ ಮಾಡಿದರೆ ಬ್ರಿಟಿಷರು ಬಡಿದು ಹಾಕುತ್ತಿದ್ದರು. ಆದರೆ ಅಹಿಂಸಾತ್ಮಕವಾಗಿ ಸ್ವಾತಂತ್ರ್ಯಕ್ಕಾಗಿ ಬಹಿರಂಗ ಪ್ರಚಾರ ಮಾಡಿದಾಗ ಆ ರೀತಿ ಬಡಿಯಲು ಬ್ರಿಟಿಷ್ ಕಾನೂನಿಗೆ ಸಾಧ್ಯವಿಲ್ಲ. ಆದ್ದರಿಂದ ಅಹಿಂಸಾತ್ಮಕ ಚಳವಳಿಯೇ ರಾಷ್ಟ್ರೀಯ ಏಕತೆಯನ್ನು ತಂದಿತು. ಹೀಗೆ ರಾಷ್ಟ್ರೀಯ ಪ್ರಜ್ಞೆ ಬೆಳೆದದ್ದು ಪರೋಕ್ಷವಾಗಿ ಕ್ರಾಂತಿಕಾರಿ ಚಟುವಟಿಕೆಗೂ ಸಹಾಯಕವಾಯಿತು.

ಅಲ್ಲದೆ, ಕ್ರಾಂತಿಕಾರಿ ಹೋರಾಟವು ಎದುರಿಸುವಾಗ ಬ್ರಿಟಿಷ್ ಪೊಲೀಸರನ್ನು ಅಥವಾ ಬ್ರಿಟಿಷ್ ಮಿಲಿಟರಿಯನ್ನು ಎದುರಿಸಬೇಕಿತ್ತು. ಬ್ರಿಟಿಷರ ಪೊಲೀಸ್ ಮತ್ತು ಮಿಲಿಟರಿಯಲ್ಲಿದ್ದ ಯೋಧರೆಲ್ಲರೂ ಭಾರತೀಯರೇ. ಅಂದರೆ ಭಾರತೀಯರು ಭಾರತೀಯರನ್ನೆ ಕೊಲ್ಲಬೇಕಾದ ಪರಿಸ್ಥಿತಿಯಿಂದ ಅಹಿಂಸಾತ್ಮಕ ಚಳವಳಿಯು ಭಾರತೀಯರನ್ನು ಬಚಾವ್ ಮಾಡಿತು.

**ಪ್ರಶ್ನೆ: ಇವತ್ತು ಅಹಿಂಸಾತ್ಮಕ ಚಳವಳಿ ಉಪಯೋಗವಿದೆಯೆ?**

**ಉತ್ತರ:** ಗೊತ್ತಿಲ್ಲ. ಏಕೆಂದರೆ ಗಾಂಧಿ ಮಾದರಿಯ ಹೋರಾಟ ಇವತ್ತು ನಿಷ್ಪ್ರಯೋಜಕ ಎನ್ನುವ ಯಾರೂ ಗಾಂಧಿ ಮಾದರಿಯ ಹೋರಾಟ ಮಾಡಿ ಉಪಯೋಗವಾಗದೆ ಪಡೆದ ಅನುಭವದಿಂದ ನಿಷ್ಪ್ರಯೋಜಕ ಎನ್ನುತ್ತಿಲ್ಲ. ಪ್ರಯೋಗ ಮಾಡದೆ ಹೇಳುತ್ತಿದ್ದಾರೆ. ಪ್ರಯೋಗಕ್ಕೆ ಇಳಿಸದೆ ಕುಳಿತಲ್ಲೆ ಹೇಳುವ ಮಾತುಗಳಿಗೆ ಮಹತ್ವವಿಲ್ಲ. ಆದರೂ ಗಾಂಧೀಜಿಯ ಕಟು ಟೀಕಾಕಾರರೆಲ್ಲರೂ ಹೋರಾಟದ ಅಗತ್ಯ ಬಂದಾಗ ಜಾಥ, ಸಭೆ, ಧರಣಿ, ಸತ್ಯಾಗ್ರಹವನ್ನು ಮಾಡುತ್ತಾರೆಯೆ ಹೊರತು ಅವರೇ ಪ್ರತಿಪಾದಿಸುವ ಹಿಂಸಾ ಕೃತ್ಯಕ್ಕೆ ಇಳಿಯುವುದಿಲ್ಲ ಎನ್ನುವುದು ಗಾಂಧಿ ಮಾದರಿಯ ಹೋರಾಟದ ಮಹತ್ವ ಇಂದಿಗೂ ಇರುವುದಕ್ಕೆ ಸಾಕ್ಷಿಯಾಗಿದೆ. ಆದರೆ ಅಂತಹ ಹೋರಾಟಗಳನ್ನು ಕೊನೆ ಮುಟ್ಟಿಸದೆ ಇರುವುದರಿಂದ ಅಂತಿಮವಾಗಿ ’ ಇದು ಹೀಗೆಯೇ’ ಎನ್ನುವುದು ಸಾಧ್ಯವಿಲ್ಲ.

**ಪ್ರಶ್ನೆ: ದೇಶ ವಿಭಜನೆಯಲ್ಲಿ ಆದ ಹತ್ಯೆಗೆ ಅಹಿಂಸೆ ಕಾರಣವಲ್ಲವೆ?**

**ಉತ್ತರ:** ಅಲ್ಲ. ಜಿನ್ನಾ ಕರೆಕೊಟ್ಟ ನೇರ ಕಾರ್ಯಾಚರಣೆ ನಡೆಯುವಾಗ ವವೆಲ್ ವೈಸರಾಯ್ ಆಗಿದ್ದು ವವೆಲ್ ಪೂರ್ತಿಯಾಗಿ ಮುಸ್ಲಿಂ ಲೀಗಿನ ಪರವಾಗಿದ್ದರು. ಕಣ್ಣ ಮುಂದೆಯೆ ಹತ್ಯೆ ನಡೆಯುತ್ತಿದ್ದರೂ ಪೊಲೀಸರು ಸುಮ್ಮನಿರುವಂತೆ ಬ್ರಿಟಿಷ್ ಸರಕಾರ ನೋಡಿಕೊಂಡಿತ್ತು. ಇದಕ್ಕಾಗಿ ವವೆಲ್ ಅವರನ್ನು ಗಾಂಧೀಜಿಯೂ ಆಕ್ಷೇಪಿಸಿದ್ದರು. ವವೆಲ್ರ ಮುಸ್ಲಿಂ ಲೀಗ್ ಪಕ್ಷಪಾತಿತನಕ್ಕಾಗಿಯೇ ಜವಾಹರ ಲಾಲ್ ನೆಹರೂ ಬ್ರಿಟನ್ ಗೆ ಹೋಗಿ ಬ್ರಿಟಿಷ್ ಸರಕಾರ ವವೆಲ್ ರನ್ನು ಹಿಂದಕ್ಕೆ ಕರೆಯಿಸಿಕೊಂಡು ಮೌಂಟ್ ಬ್ಯಾಟನ್ ಅವರನ್ನು ಭಾರತಕ್ಕೆ ಕಳಿಸುವಂತೆ ಮಾಡಿದ್ದರು. ದೇಶವಿಭಜನೆಯ ಮೊದಲು ಮತ್ತು ನಂತರದಲ್ಲಿ ಮುಸ್ಲಿಂ ಲೀಗ್ ಪ್ರಾರಂಭಿಸಿದ ಹತ್ಯಾಕಾಂಡದಲ್ಲಿ ಮುಸ್ಲಿಮರು ಹಿಂದೂ ಮತ್ತು ಸಿಖ್ಖರನ್ನು, ಸಿಖ್ಖರು ಮತ್ತು ಹಿಂದೂಗಳು ಮುಸ್ಲಿಮರನ್ನು ಹತ್ಯೆ ಮಾಡಿದ್ದರಲ್ಲಿ ಸುಮಾರು ಆರು ಲಕ್ಷ ಜನ ಹತರಾದರೆಂದು ಅಂದಾಜಿಸಲಾಗಿದೆ. ಸ್ತ್ರೀಯರ ಮೇಲೆ ಎಗ್ಗಿಲ್ಲದ ಅತ್ಯಾಚಾರಗಳೂ ನಡೆದವು. ಇಂತಹ ಸಂದರ್ಭದಲ್ಲಿ ಗೃಹ ಮಂತ್ರಿ ಸರ್ದಾರ್ ಪಟೇಲರು," ಜನರು ತಮ್ಮನ್ನು ತಾವೇ ರಕ್ಷಿಸಿಕೊಳ್ಳಬೇಕು. ಎಲ್ಲರನ್ನೂ ರಕ್ಷಿಸಲು ಸರಕಾರಕ್ಕೆ ಸಾಧ್ಯವಾಗದು" ಎಂದಿದ್ದರು. ಗಾಂಧೀಜಿಯೂ ಪರೋಕ್ಷವಾಗಿ ತಮ್ಮ ಬಳಿ ಬಂದವರು " ಅವರ ಕೈಯಲ್ಲಿ ದೊಣ್ಣೆಗಳಿದ್ದವು" ಎಂದಾಗ," ನಿಮ್ಮ ಕೈಯಲ್ಲಿ ಏನೂ ಇರಲಿಲ್ಲವೆ" ಎಂದು ಕೇಳಿದ್ದರು( ತಿರುಗೇಟು ಕೊಡಲು ಆಗುತ್ತಿರಲಿಲ್ಲವೇ ಎಂದು ಅದರರ್ಥ). ವಿಭಜನಾಪೂರ್ವ ಮತ್ತು ನಂತರದ ಹಿಂಸಾಚಾರಗಳಿಗೆ ಮುಸ್ಲಿಂ ಲೀಗ್ ಮತ್ತು ಮುಸ್ಲಿಂ ಲೀಗಿನ ಬೆಂಬಲಿಗನಾಗಿ ನಿಂತ ಬ್ರಿಟಿಷ್ ಸರಕಾರವೆ ಸಂಪೂರ್ಣ ಹೊಣೆ ಹೊರತು ಗಾಂಧೀಜಿಯಾಗಲಿ, ಗಾಂಧೀಜಿಯ ತತ್ವಗಳಾಗಲಿ ಅಲ್ಲ.

**ಪ್ರಶ್ನೆ: ಅಹಿಂಸೆಯನ್ನು ಬೋಧಿಸಬೇಕೆ?**

**ಉತ್ತರ:** ಬೋಧಿಸಬೇಕು. ಹಿಂಸೆ ಸಹಜ ಪ್ರವೃತ್ತಿ. ಅದನ್ನು ಎಲ್ಲರೂ ಮಾಡುತ್ತಾರೆ. ಅಹಿಂಸೆ ಸಂಸ್ಕಾರ. ಬೋಧನೆಯಿಂದಲೆ ಅದು ಬರಬೇಕಷ್ಟೆ.

**ಪ್ರಶ್ನೆ: ಪರಿಪೂರ್ಣ ಅಹಿಂಸೆ ಸಾಧ್ಯವೆ?**

**ಉತ್ತರ:** ಸ್ವತಃ ಗಾಂಧೀಜಿಗೇ ಇದಕ್ಕೆ ಉತ್ತರಿಸಲು ಸಾಧ್ಯವಾಗಲಿಲ್ಲ. ಜನರಲ್ ಕಾರಿಯಪ್ಪ ಎಲ್ಲವೂ ಅಹಿಂಸೆಯೇ ಆದರೆ ನಾನು ನನ್ನ ಸೈನ್ಯಕ್ಕೆ ಏನು ಕೆಲಸ ಕೊಡಲಿ? ಎಂದು ಗಾಂಧೀಜಿಯ ಬಳಿ ಕೇಳಿದಾಗ ಗಾಂಧೀಜಿ," ಈ ವಿಷಯದಲ್ಲಿ ನಾವು ದೇವರ ಮಕ್ಕಳು. ನಾನು ದೊಡ್ಡ ಮಗು. ನೀವು ಸಣ್ಣ ಮಗು. ಉತ್ತರ ಗೊತ್ತಿಲ್ಲ.ಮೊದಲು ನಿಮಗೆ ಉತ್ತರ ಹೊಳೆದರೆ ನೀವು ನನಗೆ ಹೇಳಿ.ನನಗೆ ಹೊಳೆದರೆ ನಾನು ನಿಮಗೆ ಹೇಳುತ್ತೇನೆ. ಆದರೆ ಭಾರತಕ್ಕೊಂದು ಬಲಿಷ್ಠ ಸೈನ್ಯವಂತೂ ಬೇಕೆ ಬೇಕು" ಎಂದಿದ್ದರು. ಬಹುಶಃ ಪರಿಪೂರ್ಣ ಅಹಿಂಸೆ ಸಾಧ್ಯವಿಲ್ಲ.



**ಪ್ರಶ್ನೆ: ಗಾಂಧೀಜಿಯವರು ಪಾಕಿಸ್ಥಾನಕ್ಕೆ 55 ಕೋಟಿ ರೂಪಾಯಿ ಕೊಡಿಸಿದ್ದು ತಪ್ಪಲ್ಲವೆ?**

**ಉತ್ತರ:** ಅಲ್ಲ. ಅದು ಬ್ರಿಟಿಷರು ರೂಪಿಸಿದ ಶಾಸನದ ಅಂಶವಾಗಿತ್ತು. ರಿಸರ್ವ್ ಬ್ಯಾಂಕಿನಲ್ಲಿ ಭದ್ರತಾ ಠೇವಣಿಯಾಗಿ ಇರಿಸಿದ್ದ ಹಣದಲ್ಲಿನ ಪಾಕಿಸ್ಥಾನದ ಪಾಲಿನ ಎರಡು ಕಂತುಗಳನ್ನು ಅದಾಗಲೇ ಕೊಟ್ಟಾಗಿತ್ತು. ಮೂರನೆ ಕಂತಿನ ಹಣವನ್ನು ಕೊಡುವಾಗ " ಇದನ್ನು ತಡೆ ಹಿಡಿಯಬಹುದೆ?" ಎಂಬ ಚಿಂತನೆ ಬಂದಿತ್ತೇ ಹೊರತು ಅದು ಸರಕಾರದ ನಿರ್ಧಾರವಾಗಿರಲಿಲ್ಲ. ಭಾರತ ಸ್ವಾತಂತ್ರ್ಯ ಶಾಸನವನ್ನು ಜಾರಿ ಮಾಡಲಿಕ್ಕಾಗಿಯೇ ಬಂದ ಮೌಂಟ್ ಬ್ಯಾಟನ್ ಇದನ್ನೂ ಜಾರಿ ಮಾಡದಿದ್ದರೆ ದೂರು ಬ್ರಿಟಿಷ್ ಸಂಸತ್ತಿಗೆ ಹೋಗುತ್ತಿತ್ತು. ಕೊಡಬೇಕಾದ್ದನ್ನು ಕೊಡಿ ಎಂದದ್ದರಲ್ಲಿ ತಪ್ಪೇನೂ ಇಲ್ಲ.

**ಪ್ರಶ್ನೆ: ಗಾಂಧೀಜಿ ಭಗತ್ ಸಿಂಗ್ ಅನ್ನು ಗಲ್ಲು ಶಿಕ್ಷೆಯಿಂದ ಪಾರು ಮಾಡಬಹುದಿತ್ತಲ್ಲವೆ?**

**ಉತ್ತರ:** ಅದಕ್ಕಾಗಿ ಗಾಂಧೀಜಿ ವೈಸರಾಯ್  ಇರ್ವಿನ್ ರೊಂದಿಗೆ ಎಷ್ಟು ಮಾತನಾಡಿದ್ದರೆಂದರೆ ಸ್ವತಃ ಇರ್ವಿನ್," ಈ ಗಾಂಧಿ ಹಿಂಸಾವಾದಿಗಳಿಗೆ ಇಷ್ಟೊಂದು ಬೆಂಬಲ ನೀಡುವುದನ್ನು ನೋಡಿದರೆ ಗಾಂಧಿಯ ಅಹಿಂಸೆಯೇ ಅನುಮಾನಕ್ಕೊಳಗಾಗುತ್ತಿದೆ" ಎಂದುದಕ್ಕೆ ದಾಖಲೆ ಇದೆ. ಗಾಂಧಿ ಭಗತ್ ಸಿಂಗ್ ಬಿಡುಗಡೆಗೆ ಒತ್ತಾಯಿಸಿಯೂ ಇದ್ದರು. ಅದಕ್ಕಾಗಿ ಅವರು ಬರೆದ ಪತ್ರದ ದಾಖಲೆಯೂ ಇದೆ. ಇರ್ವಿನ್ ಕೂಡ ಒಪ್ಪಿದ್ದರು. ಆದರೆ ಪಂಜಾಬ್ನ ಗವರ್ನರ್ ಭಗತ್ ಸಿಂಗ್ ಗೆ ಕ್ಷಮೆ ಕೊಟ್ಟರೆ ತಾನು ರಾಜೀನಾಮೆ ಕೊಡುತ್ತೇನೆಂದು ಇರ್ವಿನ್ ಮೇಲೆ ಒತ್ತಡ ತಂದಿದ್ದ ಎಂದು ಈ ಘಟನೆಯ ಪ್ರತ್ಯಕ್ಷದರ್ಶಿಯಾಗಿದ್ದ ಪಂಡಿತ್ ಸುಧಾಕರ ಚತುರ್ವೇದಿ ಹೇಳಿದ್ದಾರೆ.

**ಪ್ರಶ್ನೆ: ಗಾಂಧೀಜಿ ಬಂಡವಾಳಶಾಹಿಗಳ ಪರ ಇದ್ದರೆ?**

**ಉತ್ತರ:** ಇಲ್ಲ. ಗಾಂಧೀಜಿಯವರ ಧರ್ಮದರ್ಶಿತ್ವದ ಪರಿಕಲ್ಪನೆಯು ಶ್ರೀಮಂತರನ್ನು ಬಡವರ ಅಭ್ಯುದಯಕ್ಕೆ ಬದ್ಧರನ್ನಾಗಿ ಮಾಡುತ್ತದೆ.

**ಪ್ರಶ್ನೆ: ಗಾಂಧೀಜಿಯವರ ಬ್ರಹ್ಮಚರ್ಯದ ಪ್ರಯೋಗಗಳ ಬಗ್ಗೆ ಏನು ಹೇಳುತ್ತೀರಿ?**

**ಉತ್ತರ:** ಬ್ರಹ್ಮಚರ್ಯ, ಅಧ್ಯಾತ್ಮಗಳೆಲ್ಲ ವೈಯಕ್ತಿಕವಾದದ್ದು. ಬ್ರಹ್ಮಚರ್ಯ ಸಾಧನೆಗಿಳಿದವರು ಆತ್ಮಸಂಯಮದ ಪರೀಕ್ಷೆಗಾಗಿ ಇಂತಹ ಪ್ರಯೋಗಗಳನ್ನು ಮಾಡಿರುತ್ತಾರೆ. ಹೇಳಿರುವುದಿಲ್ಲ ಅಷ್ಟೆ. ಗಾಂಧೀಜಿಯವರು ರಾಜಕುಮಾರಿ ಅಮೃತ್ ಕೌರ್ ಅವರಿಗೆ ಬರೆದ ಪತ್ರದಲ್ಲಿ ತನ್ನ ಬ್ರಹ್ಮಚರ್ಯದ ಪ್ರಯೋಗದ ಬಗ್ಗೆ ಹೇಳಿದ್ದಾರೆ. ಅದು ಗಾಂಧೀಜಿಯೇ ನೀಡಿದ ಮಾಹಿತಿ ಹೊರತು ಯಾರ ಸಂಶೋಧನೆಯೂ ಅಲ್ಲ. ಪ್ರಾಮಾಣಿಕನಲ್ಲದ ವ್ಯಕ್ತಿ ಇಂತಾದ್ದನ್ನೆಲ್ಲ ಹೇಳಲು ಸಾಧ್ಯವಿಲ್ಲ.

**ಪ್ರಶ್ನೆ: ಪೂನಾ ಒಪ್ಪಂದದಲ್ಲಿ ಗಾಂಧೀಜಿ ದಲಿತರಿಗೆ ಅನ್ಯಾಯ ಮಾಡಿಲ್ಲವೆ?**

**ಉತ್ತರ:** ಇಲ್ಲ. ಒಂದು ವೇಳೆ ದಲಿತರಿಗೆ ಪ್ರತ್ಯೇಕ ಮತ ಕ್ಷೇತ್ರ ಕೊಟ್ಟಿದ್ದರೆ ಎಲ್ಲರನ್ನೂ ಪ್ರತಿನಿಧಿಸುವ ಅವಕಾಶ ದಲಿತರಿಗೆ ಇಲ್ಲವಾಗುತ್ತಿತ್ತು. ಮತ್ತು ಬ್ರಿಟಿಷ್ ಸರಕಾರ ಕೊಟ್ಟ ಪ್ರತ್ಯೇಕ ಮತ ಕ್ಷೇತ್ರದ ಅವಕಾಶವನ್ನು 1950 ರಲ್ಲಿ ಜಾರಿಗೆ ಬಂದ ಸಂವಿಧಾನ ಮಾನ್ಯ ಮಾಡಿಲ್ಲ. ಆದರೆ ಎಲ್ಲರನ್ನೂ ಪ್ರತಿನಿಧಿಸಲು ದಲಿತ ನಾಯಕನಿಗೆ ಇಡೀ ಕ್ಷೇತ್ರವನ್ನೆ ಮೀಸಲಾಗಿರಿಸುವ ಅವಕಾಶವನ್ನು ಗಾಂಧೀಜಿ ಒಪ್ಪಿದ್ದು ಇಂದಿಗೂ ಭಾರತ ಸಂವಿಧಾನದ ಮುಖಾಂತರ ಅದು ಜಾರಿಯಲ್ಲಿದೆ.

**ಪ್ರಶ್ನೆ: ಗಾಂಧೀಜಿಯ ಚಿಂತನೆಗಳಿಗೂ ಅಂಬೇಡ್ಕರರ ಚಿಂತನೆಗಳಿಗೂ ವ್ಯತ್ಯಾಸವೇನು?**

**ಉತ್ತರ:** ಅಹಿಂಸೆಯ ವಿಷಯದಲ್ಲಿ ಗಾಂಧೀಜಿ ಮತ್ತು ಅಂಬೇಡ್ಕರ್ ಇಬ್ಬರದೂ ಒಂದೇ ನಿಲುವು. ಆದರೆ ಅಂಬೇಡ್ಕರ್ ರಾಜಕೀಯ ಹೋರಾಟಗಳ ಮೂಲಕ ಕಾನೂನು ರೀತ್ಯಾ ಸಾಮಾಜಿಕ ನ್ಯಾಯವನ್ನು ಸಾಧಿಸುವ ದೃಷ್ಟಿಕೋನದವರು. ಗಾಂಧೀಜಿ ನೈತಿಕತೆ ಮತ್ತು ಧಾರ್ಮಿಕ ಬದ್ಧತೆಗಳ ಅರಿವಿನ ಮೂಲಕ ವ್ಯಕ್ತಿಯಲ್ಲಿಯೇ ಪರಿವರ್ತನೆ ತಂದು ಸಾಮಾಜಿಕ ನ್ಯಾಯವನ್ನು ಸಾಧಿಸಬೇಕೆಂಬ ದೃಷ್ಟಿಕೋನದವರು.

**ಪ್ರಶ್ನೆ: ಗಾಂಧೀಜಿಯವರ ಆರ್ಥಿಕ ಚಿಂತನೆಗಳು ಪ್ರಸ್ತುತವೇ?**

**ಉತ್ತರ:** ಎಲ್ಲ ಅರ್ಥಗಳಲ್ಲೂ ಪ್ರಸ್ತುತ ಅಲ್ಲ. ಆದರೆ ಅತ್ಯಂತ ಹತಾಶ ಸಂದರ್ಭದಲ್ಲಿ ಗಾಂಧೀಜಿಯವರ ಆರ್ಥಿಕ ಚಿಂತನೆಗಳೇ ಇಂದಿಗೂ ಕಟ್ಟಕಡೆಯ ವ್ಯಕ್ತಿಯ ಅನಿವಾರ್ಯ ಅವಶ್ಯಕತೆಯಾಗಿ ಪ್ರಸ್ತುತವಾಗಿಯೇ ಇದೆ.

ಬಂಡವಾಳವಾದ ಮತ್ತು ಸಮಾಜ ವಾದ ಎರಡೂ ಲಾಭದ ವಿತರಣೆಯಲ್ಲಿ ಭಿನ್ನವಾಗಿವೆ. ಆದರೆ ಲಾಭ ಗಳಿಕೆಯಲ್ಲಿ ಯಂತ್ರಗಳ ಬಳಕೆಯ ವಿಷಯದಲ್ಲಿ ಅವುಗಳ ನಡುವೆ ಭಿನ್ನಾಭಿಪ್ರಾಯವಿಲ್ಲ. ಉತ್ಪಾದನಾ ವಿಧಾನದಲ್ಲಿ ಸಮಾಜವಾದ ಮತ್ತು ಬಂಡವಾಳ ವಾದ ಒಂದೇ ನಿಲುವಿನದು. ಆದರೆ ಗಾಂಧೀಜಿಯವರ ಆರ್ಥಿಕ ಚಿಂತನೆಯಲ್ಲಿ ಉತ್ಪಾದನಾ ವಿಧಾನವೇ ಬದಲಾಗುತ್ತದೆ. ಯಂತ್ರಗಳ ಬಳಕೆಯು ಮನುಷ್ಯರ ಉದ್ಯೋಗವನ್ನು ಕಸಿಯಲು ಗಾಂಧಿ ಅನುಮತಿಸುವುದಿಲ್ಲ. ಬಂಡವಾಳ ವಾದವು ಆರ್ಥಿಕತೆಯನ್ನು ಖಾಸಗಿಯವರ ಕೈಗೆ ಕೊಟ್ಟರೆ, ಸಮಾಜ ವಾದವು ಸರಕಾರದ ಕೈಗೆ ಕೊಡುತ್ತದೆ. ಗಾಂಧೀಜಿ ಆರ್ಥಿಕತೆಯನ್ನು ಬಂಡವಾಳಿಗರ ಕೈಗೂ ಕೊಡುವುದಿಲ್ಲ. ಸರಕಾರದ ಕೈಗೂ ಕೊಡುವುದಿಲ್ಲ. ಗ್ರಾಮದ ಜನರ ಸಮುದಾಯದ ಕೈಗೆ ಕೊಡುತ್ತಾರೆ. ಆದರ್ಶಾತ್ಮಕ ನೆಲೆಯಲ್ಲಿ ಬಂಡವಾಳ ವಾದ ಒಳಿತನ್ನುಂಟುಮಾಡಬೇಕಾದರೆ ಬಂಡವಾಳಿಗರು ನೀತಿವಂತರಾಗಿರಬೇಕು. ಲಾಭಕೋರರಾಗಿರಬಾರದು. ಸಮಾಜ ವಾದ ಒಳಿತನ್ನುಂಟುಮಾಡಬೇಕಾದರೆ ಆಳುವ ವರ್ಗದವರು ಒಳ್ಳೆಯವರಾಗಿರಬೇಕು. ಅಂದರೆ ಎರಡೂ ಸಿದ್ಧಾಂತಗಳೂ ಮನುಷ್ಯ ಒಳ್ಳೆಯವನಾಗಿರುವುದನ್ನು ಬಯಸುತ್ತವೆ. ಗಾಂಧೀಜಿಯ ಆರ್ಥಿಕ ಚಿಂತನೆಗಳು ಮನುಷ್ಯನ ಒಳ್ಳೆಯತನದಿಂದಲೇ ಪ್ರಾರಂಭವಾಗಿ ನಂತರ ಸಿದ್ಧಾಂತದ ರೂಪ ಧರಿಸುತ್ತದೆ. ಆದ್ದರಿಂದ ಗಾಂಧೀಜಿಯವರ ಆರ್ಥಿಕ ಚಿಂತನೆಗಳು ಸಮಾಜವಾದ ಮತ್ತು ಬಂಡವಾಳ ವಾದವೆರಡರ ನಡುವಿನಲ್ಲಿದ್ದು 1900 ವರ್ಷಗಳ ಹಿಂದೆ ತಿರುವಳ್ವರ್ ರೂಪಿಸಿದ ಆರ್ಥಿಕ ಪರಿಕಲ್ಪನೆಗಳನ್ನು ವಿಸ್ತರಿಸುತ್ತದೆ.

**ಪ್ರಶ್ನೆ: ಗಾಂಧೀಜಿಯ ರಾಮನೂ ಅಯೋಧ್ಯೆಯ ರಾಮನೂ ಬೇರೆಬೇರೆಯೆ?**

**ಉತ್ತರ:** ಅಲ್ಲ. " ರಘುಪತಿ ರಾಘವ ರಾಜಾರಾಂ" ಎನ್ನುವಲ್ಲಿ ಬರುವ ರಘುಕುಲದ ಅಧಿಪತಿಯಾದ ರಾಮ ಅಯೋಧ್ಯೆಯ ರಾಮನೇ ಆದುದರಿಂದ ಗಾಂಧೀಜಿಯ ರಾಮನೂ ಅಯೋಧ್ಯೆಯ ರಾಮನೂ ಬೇರೆಬೇರೆಯಲ್ಲ.

**ಪ್ರಶ್ನೆ: ಗಾಂಧೀಜಿಯ ಬಗ್ಗೆ ಆರ್. ಎಸ್.ಎಸ್. ನವರ ನಿಲುವು ಏನು?**

**ಉತ್ತರ:** ಆರ್. ಎಸ್. ಎಸ್. ಒಂದು

ಸಂಸ್ಥೆ. ಈಗಲೂ ಅಸ್ತಿತ್ವದಲ್ಲಿದೆ. ಅವರಲ್ಲಿರುವ ದಾಖಲೆಗಳ ಆಧಾರದಲ್ಲಿ ಅವರೇ ಇದಕ್ಕೆ ಉತ್ತರಿಸಬೇಕು. ದಯವಿಟ್ಟು ಆರ್.ಎಸ್.ಎಸ್.ಸರಸಂಘ ಚಾಲಕರನ್ನು ಸಂಪರ್ಕಿಸಿ.

**ಪ್ರಶ್ನೆ: ಗಾಂಧೀಜಿ ಬದುಕಿದ್ದರೆ ಕಾಂಗ್ರೆಸ್ ಅವರನ್ನು ಮೂಲೆಪಾಲು ಮಾಡುತ್ತಿತ್ತೆ?**

**ಉತ್ತರ:** ಕಾಂಗ್ರೆಸ್ ಒಂದು ಪಕ್ಷ. ಈಗಲೂ ಅಸ್ತಿತ್ವದಲ್ಲಿದೆ. ಅವರಲ್ಲಿರುವ ದಾಖಲೆಗಳ ಆಧಾರದಲ್ಲಿ ಅವರಿಂದಲೇ ಉತ್ತರವನ್ನು ಪಡೆಯಲು ದಯವಿಟ್ಟು ಕಾಂಗ್ರೆಸ್ನ ರಾಷ್ಟ್ರೀಯ ಅಧ್ಯಕ್ಷರನ್ನು ಸಂಪರ್ಕಿಸಿ.

**ಪ್ರಶ್ನೆ: ಗಾಂಧೀಜಿ ನೆಹರೂ ಅವರನ್ನು ಪ್ರಧಾನಿ ಮಾಡಿದ್ದು ಸರಿಯಾ?**

**ಉತ್ತರ:** ಸರ್ದಾರ್ ಪಟೇಲರಿಗೆ ಬಹುಮತ ಬಂದ ನಂತರ ಕಾಂಗ್ರೆಸ್ ಗಾಂಧೀಜಿಯವರಿಗೆ ನಾವು ಇವರನ್ನು ಆರಿಸಿದ್ದೇವೆ. ಇನ್ನು ನಿಮಗೆ ಬಿಟ್ಟದ್ದು. ನೀವು ಯಾರನ್ನು ಆರಿಸಿದರೂ ಒಪ್ಪಿಕೊಳ್ಳುತ್ತೇವೆ ಎಂದು ತಿಳಿಸಿತ್ತು. ಗಾಂಧೀಜಿ ಆಗ ಕಾಂಗ್ರೆಸ್ನ ಪ್ರಾಥಮಿಕ ಸದಸ್ಯರೂ ಆಗಿರಲಿಲ್ಲ. ಕಾಂಗ್ರೆಸ್ಸೇ ಅಧಿಕಾರ ಕೊಟ್ಟ ಮೇಲೆ ಗಾಂಧೀಜಿಯವರ ಆಯ್ಕೆ ತಪ್ಪಲ್ಲ. ಆದರೂ ಪ್ರಜಾಪ್ರಭುತ್ವ ನಿಲುವಿನಲ್ಲಿ ಗಾಂಧೀಜಿ ನೆಹರೂ ಅವರನ್ನು ಸೂಚಿಸಿದ್ದು ತಪ್ಪು. ಆದರೆ ತಾತ್ವಿಕವಾಗಿ ನೆಹರೂ ಅವರನ್ನು ಆರಿಸಿದ್ದು ಸರಿಯಾಗಿತ್ತು. ಸರ್ದಾರ್ ಪಟೇಲರ ಕಾರ್ಯದಕ್ಷತೆ ಉನ್ನತವಾಗಿತ್ತು. ಆದರೆ ರಾಜತಾಂತ್ರಿಕ ಜ್ಞಾನದಲ್ಲಿ ನೆಹರೂ ಅವರೇ ಹೆಚ್ಚು ಸಮರ್ಥರಾಗಿದ್ದರು.

**ಪ್ರಶ್ನೆ: ಗಾಂಧೀಜಿಯನ್ನು ಯಾಕೆ ರಾಷ್ಟ್ರಪಿತ/ ಮಹಾತ್ಮಾ ಎಂದು ಕರೆಯಬೇಕು?**

**ಉತ್ತರ:** ಕರೆಯಬೇಕೆಂದು ಯಾರೂ ಕಡ್ಡಾಯಪಡಿಸಿಲ್ಲ. ಸರ್ದಾರ್ ಪಟೇಲರನ್ನು ಉಕ್ಕಿನ ಮನುಷ್ಯ ಎನ್ನಲಾಗುತ್ತದೆ. ಅದರರ್ಥ ಅವರ ದೇಹದಲ್ಲಿ ಚರ್ಮ ಮಾಂಸಗಳಿರಲಿಲ್ಲ; ಕಬ್ಬಿಣವೇ ಇತ್ತು ಎಂದಲ್ಲ. ನೇತಾಜಿ ಸುಭಾಷ್ಚಂದ್ರ ಭೋಸ್, ಭಾರತದ ಕೋಗಿಲೆ ಸರೋಜಿನಿ ನಾಯ್ಡು, ಆಚಾರ್ಯ ವಿನೋಬಾ, ಲೋಕ ನಾಯಕ ಜಯಪ್ರಕಾಶ ನಾರಾಯಣ, ಲೋಕ ಮಾನ್ಯ ತಿಲಕ್, ಬಾಬಾ ಸಾಹೇಬ ಅಂಬೇಡ್ಕರ್, ವೀರ ಸಾವರ್ಕರ್ ಎಂದೆಲ್ಲ ವಿಶೇಷಣಗಳ ಬಳಕೆ ಇದೆ. ಹಾಗೆಯೇ ಗಾಂಧೀಜಿಗೂ. ಆದರೆ ಹಾಗೆ ಕರೆಯಲೇ ಬೇಕೆಂಬ ನಿಯಮವಿಲ್ಲ. ಅದೇ ರೀತಿ ಹಾಗೆಯೇ ಕರೆಯುತ್ತೇನೆ ಎನ್ನುವವರನ್ನು ಅವಕಾಶವಿಲ್ಲ.

**ಪ್ರಶ್ನೆ: ಗಾಂಧೀಜಿ ಮುಸ್ಲಿಮರು ಹಿಂದೂಗಳ ಮೇಲೆ ಆಕ್ರಮಣ ಮಾಡಿದಾಗ ತಡೆಯಲು ಹೋಗಿದ್ದರೆ?**

**ಉತ್ತರ:** ಹೌದು.ದೇಶ ವಿಭಜನೆಯ ಸಮಯದಲ್ಲಿ ಮುಸ್ಲಿಂ ಲೀಗ್ ಪ್ರಚೋದಿತ ಮುಸ್ಲಿಮರೇ ಹಿಂದೂಗಳ ಮೇಲೆ ಮೊದಲು ಆಕ್ರಮಣ ಮಾಡಿದ್ದು. ಆಕ್ರಮಣ ಶುರುವಾದ ಮೇಲೆ ಅವರೊ ಇವರೊ ಎಂದು ಉಳಿಯುವುದಿಲ್ಲ. ಪರಸ್ಪರ ಆಕ್ರಮಣ ಆಗಿರುತ್ತದೆ. ದೇಶ ವಿಭಜನೆಯಲ್ಲಿ ಹಿಂದೂ ಮತ್ತು ಸಿಖ್ಖರು ಮಾತ್ರ ಹತ್ಯೆಯಾದದ್ದಲ್ಲ. ಮುಸ್ಲಿಮರ ಹತ್ಯೆಯೂ ಆಗಿದೆ. ಅಲ್ಲಿ ಗಾಂಧೀಜಿ ಹೋಗಿ ಹತ್ಯೆಯನ್ನು ತಡೆಯುವಾಗ ಮುಸ್ಲಿಮರ ರಕ್ಷಣೆ ಮಾತ್ರ ಅಲ್ಲ, ಹಿಂದೂಗಳ ರಕ್ಷಣೆಯೂ ಆಗಿದೆ. ಕೋಮುಗಲಭೆಯಾದಾಗ ಎರಡೂ ಕೋಮಿನವರು ಪರಸ್ಪರ ಕೈಹಿಡಿದುಕೊಂಡು ಆಕ್ರಮಣಕಾರರು ಬಾರದಂತೆ ತಡೆಯುವುದು ಗಾಂಧೀಜಿಯ ಪದ್ಧತಿಯಾಗಿತ್ತು. 1937 ರಲ್ಲಿ ಹರ್ಯಾಣಾದಲ್ಲಿ ಅಹೀರರು ಮತ್ತು ಜಾಟರ ನಡುವೆ ಸಂಘರ್ಷವಾದಾಗ ಎರಡು ಜಾತಿಗಳ ದ್ವೇಷವನ್ನು ಶಮನಗೊಳಿಸಲು ಹೋಗಿದ್ದ ಗಾಂಧೀಜಿ ಅಲ್ಲಿಯೂ ಇದನ್ನೆ ಮಾಡಿದ್ದರು. ದೇಶ ವಿಭಜನೆಯಾದ ಮೇಲೆ ಮಹಮದಾಲಿ ಜಿನ್ನಾ," ಇನ್ನು ನೀವು ಹಿಂದೂಗಳೂ ಅಲ್ಲ.ಮುಸ್ಲಿಮರೂ ಅಲ್ಲ.ಒಂದೊ ನೀವು ಭಾರತೀಯರು. ಅಥವಾ ಪಾಕಿಸ್ಥಾನೀಯರು" ಎಂದಾಗ ಗಾಂಧೀಜಿ ಜಿನ್ನಾ ಅವರಿಗೆ," ಇದು ಬರೀ ಬಾಯಲ್ಲಿ ಹೇಳುವುದೊ, ನಿಮ್ಮ ದೇಶದ ಅಲ್ಪಸಂಖ್ಯಾತರ ರಕ್ಷಣೆಗೆ ಏನಾದರೂ ಮಾಡಲಿಕ್ಕಿದೆಯೆ?" ಎಂದೂ ಜಿನ್ನಾ ಅವರಿಗೆ ಕೇಳಿದ್ದರು. ಪಾಕಿಸ್ಥಾನದ ಪಂಜಾಬ್ ಪ್ರಾಂತ್ಯದ ಹತ್ಯೆಯ ಸುದ್ದಿ ಬಂದಾಗ ಕಲ್ಕತ್ತಾದಲ್ಲಿದ್ದ ಗಾಂಧೀಜಿಯ ಬಳಿಗೆ ಮುಸ್ಲಿಂ ಯುವತಿಯೊಬ್ಬಳು ಬಂದು ನಾನು ಪಂಜಾಬ್ ಗೆ ಹೋಗಿ ಹಿಂದೂಗಳ ಹತ್ಯೆಯನ್ನು ತಡೆಯುತ್ತೇನೆ ಎಂದಾಗ ಗಾಂಧೀಜಿ," ಬೇಡ. ನೀನಿನ್ನೂ ಬದುಕಬೇಕಾದವಳು. ನಾನೇ ಹೋಗುತ್ತೇನೆ" ಎಂದು ಗಾಂಧೀಜಿ ಹೇಳಿದ್ದರು. ಗಾಂಧಿ ಹತ್ಯೆ ಆಗದೆ ಇದ್ದರೆ ಮುಂದಿನ ಇಪ್ಪತ್ತು ದಿನಗಳಲ್ಲಿ ಪಾಕಿಸ್ಥಾನದಲ್ಲಿ ನಡೆಯುವ ಹತ್ಯೆಗಳನ್ನು ತಡೆಯಲು ಗಾಂಧೀಜಿ ಹೋಗುವವರಿದ್ದರು. ಅದಕ್ಕಾಗಿ ಪ್ರಯಾಣದ ಸಿದ್ಧತೆಗೂ ಸೂಚಿಸಿದ್ದರು.

**ಪ್ರಶ್ನೆ: ಅಂಬೇಡ್ಕರ್ ಹೇಳಿದ ಹಾಗೆ ಮುಸ್ಲಿಮರನ್ನೆಲ್ಲ ಪಾಕಿಸ್ಥಾನಕ್ಕೆ ಕಳಿಸಿ ಹಿಂದೂಗಳನ್ನೆಲ್ಲ ಭಾರತಕ್ಕೆ ಕರೆಸಿದ್ದರೆ ಚೆನ್ನಾಗಿತ್ತಲ್ಲವೆ?**

**ಉತ್ತರ:** ಹಾಗೆ ಮಾಡಿದ್ದರೆ ಪಾಕಿಸ್ಥಾನದಲ್ಲಿ ಹಿಂದೂಗಳ ಅಸ್ತಿತ್ವವೇ ಹೊರಟು ಹೋಗುತ್ತಿತ್ತು ಎನ್ನುವುದು ಒಂದು ವಿಷಯ. ಅಂಬೇಡ್ಕರ್ ನಿಜವಾಗಿಯೂ ಆ ರೀತಿ ಮಾಡಲು ಬಯಸಿದ್ದರೆ ಸ್ವತಃ ಅವರೇ ಬ್ರಿಟಿಷ್ ವೈಸರಾಯ್ ಸಮಿತಿಯ ಸದಸ್ಯರಾಗಿದ್ದವರು. ನೇರವಾಗಿ ಬ್ರಿಟಿಷ್ ಸರಕಾರಕ್ಕೆ ಹೇಳಬಹುದಿತ್ತು. ಆದರೆ ಪ್ರಾಕ್ಟಿಕಲಿ ಅದು ಆ ಕ್ಷಣಕ್ಕೆ ಸಾಧ್ಯ ಇರಲಿಲ್ಲ. ಆ ಕಾಲಕ್ಕೆ ಸುಮಾರು ನಾಲ್ಕೂವರೆ ಕೋಟಿ ಜನರನ್ನು ಪಾಕಿಸ್ಥಾನಕ್ಕೆ ಕಳಿಸಬೇಕಾದರೆ ಭಾರತದಲ್ಲಿದ್ದ ಅವರ ಸ್ಥಿರಾಸ್ಥಿಯನ್ನು ಸರಕಾರವೇ ಖರೀದಿಸಬೇಕು. ರಾಷ್ಟ್ರದ ಮೊದಲ ಬಜೆಟ್ ಇದ್ದದ್ದೆ 154 ಕೋಟಿ ರೂಪಾಯಿ. ನಾಲ್ಕೂವರೆ ಕೋಟಿ ಜನರ ಸ್ಥಿರಾಸ್ತಿಯ ಖರೀದಿಗೆ ಬೇಕಾದಷ್ಟು ಹಣ ಬೊಕ್ಕಸದಲ್ಲಿ ಇರಲಿಲ್ಲ. ಅಷ್ಟೆಲ್ಲ ಹಣ ಸಂಗ್ರಹಿಸಿ ಕಳಿಸಬೇಕಾದರೆ ಕನಿಷ್ಠ ಇಪ್ಪತ್ತು ವರ್ಷಗಳಾದರೂ ಬೇಕಿತ್ತು. " ಬ್ರಿಟಿಷರು ಹೋಗಲಿ. ಆಮೇಲೆಯೂ ಒಟ್ಟಿಗೆ ಇರಲು ಆಗದಿದ್ದರೆ ಅಣ್ಣ ತಮ್ಮಂದಿರು ಆಸ್ತಿಯನ್ನು ಪಾಲು ಮಾಡಿಕೊಂಡ ಹಾಗೆ ನಾವು ಪಾಲು ಮಾಡಿಕೊಳ್ಳೋಣ" ಎಂದು ಗಾಂಧೀಜಿ ಹೇಳಿದ್ದರು. ಜಿನ್ನಾ ಒಪ್ಪಲಿಲ್ಲ.

**ಪ್ರಶ್ನೆ: ದೇಶ ವಿಭಜನೆಯನ್ನು ಹೇಗಾದರೂ ತಡೆಯಬಹುದಿತ್ತಲ್ಲವೆ?**

**ಉತ್ತರ:** ಆ ಎಲ್ಲ ಪ್ರಯತ್ನಗಳೂ ಆಗಿವೆ. ದೇಶ ವಿಭಜನೆ ಆಗದ ಹಾಗೆ ಒಂದು ಸೂತ್ರವನ್ನು ಕ್ಯಾಬಿನೆಟ್ ನಿಯೋಗ ಹೇಳಿತ್ತು. ಭಾರತವನ್ನು ಮೂರು ಘಟಕಗಳಾಗಿ ವಿಭಜಿಸುವುದು. ದೆಹಲಿ ಕೇಂದ್ರಿತ ಪ್ರಧಾನ ಭಾಗವನ್ನು ಕಾಂಗ್ರೆಸ್ ಕೈಗೂ, ಢಾಕ್ಕಾ ಕೇಂದ್ರಿತ ಪೂರ್ವ ಭಾಗವನ್ನು ಮತ್ತು ಇಸ್ಲಮಾ ಬಾದ್ ಕೇಂದ್ರಿತ ಪಶ್ಚಿಮ ಭಾಗವನ್ನು ಮುಸ್ಲಿಂ ಲೀಗ್ ಕೈಗೂ ಕೊಡುವುದು. ಆದರೆ ದೆಹಲಿ ಕೇಂದ್ರಿತ ಕೇಂದ್ರ ಸರಕಾರಕ್ಕೆ ಉಳಿದೆರಡು ಘಟಕಗಳ ಮೇಲೆ ರಕ್ಷಣೆ, ವಿದೇಶಾಂಗ, ಸಂಚಾರದ ಅಧಿಕಾರ ಬಿಟ್ಟರೆ ಬೇರೆ ಯಾವುದೇ ಅಧಿಕಾರ ಇಲ್ಲ. ಕೇಂದ್ರ ಸರಕಾರಕ್ಕೆ ಯಾವುದೇ ಅಧಿಕಾರ ಇಲ್ಲದ

ಪ್ರಾಂತ್ಯಗಳು ಹೊರಕ್ಕೆ ಒಂದೇ ದೇಶವಾಗಿಯೂ, ಒಳಗೆ ನಿತ್ಯ ಸಂಘರ್ಷದ ಕೇಂದ್ರವಾಗಿಯೂ ಪರಿಣಮಿಸುತ್ತದೆ ಎಂದು ಭಾವಿಸಿದ ನೆಹರೂ ಇದರಲ್ಲಿ ಕೆಲವು ತಿದ್ದುಪಡಿ ಮಾಡಿಕೊಳ್ಳುವ ಅಧಿಕಾರ ಕಾಂಗ್ರೆಸ್ ಗೆ ಇದೆ ಎಂದು ಹೇಳಿಕೆ ಕೊಟ್ಟರು. ತಕ್ಷಣ ಮುಸ್ಲಿಂ ಲೀಗ್ ಪ್ರತಿಭಟನೆ ಶುರು ಮಾಡಿತು. ಅದೇ ಪ್ರಸ್ತಾವನೆಗೆ ಕೊನೆಗೆ ಕಾಂಗ್ರೆಸ್ ಒಪ್ಪಿದರೂ ಮುಸ್ಲಿಂ ಲೀಗ್ ಒಪ್ಪಲಿಲ್ಲ. ಆಗ ಮುಸ್ಲಿಂ ಲೀಗ್ ಹೇಳಿದಂತೆ ಕೇಳುವ ವೈಸರಾಯ್ ವವೆಲ್ ಗಾಂಧೀಜಿ ಮತ್ತು ನೆಹರೂ ಅವರನ್ನು ಕರೆದು, ಕೇಂದ್ರ ಸರಕಾರ ಸರ್ವಾನುಮತದಿಂದ ಅಂಗೀಕರಿಸಿದ್ದನ್ನೂ ತನ್ನ ಒಂದೇ ಓಟ್ ನಿಂದ ರದ್ದುಪಡಿಸುವ ವಿಟೋ ಅಧಿಕಾರವನ್ನು ಮುಸ್ಲಿಂ ಲೀಗಿಗೆ ಕೊಡಲು ಒಪ್ಪುವುದಾದರೆ, ಜಿನ್ನಾರನ್ನು ಒಪ್ಪಿಸಲು ಪ್ರಯತ್ನಿಸುವುದಾಗಿ ಹೇಳಿದರು. ಇದು ಆತ್ಮಹತ್ಯೆಯ ರೂಪದ ಪ್ರಸ್ತಾವನೆ ಎಂದು ಗಾಂಧಿ, ನೆಹರೂ ಇಬ್ಬರೂ ಆ ಪ್ರಸ್ತಾವನೆಯನ್ನು ತಿರಸ್ಕರಿಸಿದರು. ನೆಹರೂ ಇಂಗ್ಲೆಂಡ್ ಗೆ ಹೋಗಿ ವವೆಲ್ ರನ್ನು ಹಿಂದಕ್ಕೆ ಕರೆಸಿ, ಮೌಂಟ್ ಬ್ಯಾಟನ್ ಅವರನ್ನು ವೈಸರಾಯ್ ಆಗಿ ಮಾಡಿಸಿಕೊಂಡು ಬಂದರು. ಮುಸ್ಲಿಂ ಲೀಗಿನ ಬೇಡಿಕೆ ಇದ್ದದ್ದು  ಈಗಿನ ಉತ್ತರ ಪ್ರದೇಶ, ಅಸ್ಸಾಂನ ಭಾಗಗಳೆಲ್ಲ ಸೇರಿ ಭಾರತದ ತಲೆಯ ಹಾಗೆ ಕಾಣುವ ಇಡೀ ಪಾಕಿಸ್ಥಾನವಾಗಬೇಕೆಂದು. ಇದನ್ನು ಮೌಂಟ್ ಬ್ಯಾಟನ್ ಒಪ್ಪಲಿಲ್ಲ. ಆದರೆ ಮೌಂಟ್ ಬ್ಯಾಟನ್ ಕಾಶ್ಮೀರಕ್ಕೆ ಹೋಗಿ ಮಹಾರಾಜ ಹರಿಸಿಂಗ್ ಬಳಿ," ಸರ್ದಾರ್ ಪಟೇಲರು ಒಪ್ಪಿದ್ದಾರೆ. ನೀವು ಪಾಕಿಸ್ಥಾನಕ್ಕೆ ಸೇರುವುದು ಒಳ್ಳೆಯದು" ಎಂದು ಸಲಹೆ ಕೊಟ್ಟಿದ್ದರು. ದೇಶ ವಿಭಜನೆಯ ಸಮಯದಲ್ಲಿ ಭಾರತಕ್ಕೆ ಗರಿಷ್ಠ ಒಳಿತನ್ನು ಮಾಡಬಹುದಾದ್ದೆಲ್ಲವನ್ನೂ ಮಾಡಲಾಗಿತ್ತು. ಮತ್ತು ಬ್ರಿಟಿಷ್ ಸರಕಾರ ಮನಸು ಮಾಡಿದ್ದರೆ ಅದನ್ನು ತಡೆಯಲೂ ಬಹುದಾಗಿತ್ತು.ಆದರೆ ಮಾತುಕತೆಗಾಗಿ ಸಿಮ್ಲಾ ಸಭೆ ಮಾಡಿದ ಬ್ರಿಟಿಷ್ ಅಧಿಕಾರಿಗಳೇ ಹಿಂದಿನ ರಾತ್ರಿ ಜಿನ್ನಾ ಬಳಿಗೆ ಹೋಗಿ ಎಷ್ಟು ಮಾತ್ರಕ್ಕೂ ಗಾಂಧೀಜಿಯ ಪ್ರಸ್ತಾವನೆಯನ್ನು ಒಪ್ಪಬೇಡಿ, ಪಾಕಿಸ್ಥಾನ ನಾವು ಮಾಡಿಕೊಡುತ್ತೇವೆ ಎಂದಿದ್ದರು. ದೇಶ ವಿಭಜನೆ ಒಂದು ಅನಿವಾರ್ಯತೆ ಎಂದು ಅರ್ಥವಾದದ್ದರಿಂದಲೇ ಆ ಕಾಲದಲ್ಲಿ ಆರ್. ಎಸ್.ಎಸ್. ಆಗಲಿ, ಸಾವರ್ಕರ್ ನೇತೃತ್ವದ ಹಿಂದೂ ಮಹಾ ಸಭಾ ಆಗಲಿ ದೇಶ ವಿಭಜನೆಯನ್ನು ತಡೆಯಲು ಹೋರಾಟ ಮಾಡಲಿಲ್ಲ; ಆದರೆ ನಿರಾಶ್ರಿತರ ಸಮಸ್ಯೆಗೆ ಸ್ಪಂದಿಸಿದ್ದವು ಎಂದು ಅರ್ಥ ಮಾಡಿಕೊಳ್ಳಬೇಕು.

**ಪ್ರಶ್ನೆ: ಗಾಂಧೀಜಿ " ರಘುಪತಿ ರಾಘವ ರಾಜಾರಾಂ" ಪದ್ಯವನ್ನು ತಿದ್ದಿದ್ದು ಸರಿಯೇ?**

**ಉತ್ತರ:** ಇದರಲ್ಲಿ ಸರಿ ತಪ್ಪಿನ ಪ್ರಶ್ನೆ ಉದ್ಭವಿಸುವುದಿಲ್ಲ. ಗಾಂಧೀಜಿ ಅವರ ಅವಶ್ಯಕತೆಗೆ ತಕ್ಕಂತೆ ಪದ್ಯವನ್ನು ಬಳಸಿದರಷ್ಟೆ. ಮೂಲ ಪದ್ಯ ಹಾಗೆಯೇ ಇದೆ. ಅದನ್ನು ಮೂಲ ರೂಪದಲ್ಲೆ ಜನಪ್ರಿಯಗೊಳಿಸಬಯಸುವವರು ಈಗಲೂ ಆ ಕೆಲಸವನ್ನು ಮಾಡಬಹುದು. ವಾಲ್ಮೀಕಿ ರಾಮಾಯಣವೂ ಹಲವು ಬಗೆಯಲ್ಲಿ ಬರೆಯಲ್ಪಟ್ಟಿದೆ. ಆದರೆ ವಾಲ್ಮೀಕಿ ರಾಮಾಯಣ ಹಾಗೆಯೇ ಇದೆ. ವಾಲ್ಮಿಕಿ ರಾಮಾಯಣವೇ ಬೇಕು ಎನ್ನುವವರು ಅದನ್ನೆ ಓದಲು ಉಳಿದ ರಾಮಾಯಣಗಳ ರಚನೆಕಾರರು ಅಡ್ಡಿಪಡಿಸುವುದಿಲ್ಲ.ಹಾಗೆಯೇ ಇದೂ ಕೂಡ. ಲೇಖಕ ಸತ್ತು 60 ವರ್ಷಗಳ ನಂತರ ಕೃತಿಯ ಮೇಲೆ ಹಕ್ಕು ಸ್ವಾಮ್ಯ ಕಾನೂನು ರೀತ್ಯಾ ಇರುವುದಿಲ್ಲ. ರಘುಪತಿ ರಾಘವ ರಾಜಾರಾಂ ಪದ್ಯದ ರಚನೆಕಾರ ಗತಿಸಿ 60 ವರ್ಷ ಕಳೆದಿತ್ತು. ಅದನ್ನು ಬಳಸಲು ಗಾಂಧೀಜಿಗೆ ಯಾರ ಅನುಮತಿಯ ಅಗತ್ಯವೂ ಇರಲಿಲ್ಲ.

**ಪ್ರಶ್ನೆ: ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾದ ಸುಭಾಷ್‌ಚಂದ್ರ ಭೋಸರು ರಾಜೀನಾಮೆ ಕೊಡುವ ಹಾಗೆ ಗಾಂಧೀಜಿ ಮಾಡಿದ್ದು ಸರಿಯಾ?**

**ಉತ್ತರ:** ಇಲ್ಲ, ಪ್ರಜಾತಾಂತ್ರಿಕವಾಗಿ ಗಾಂಧೀಜಿಯದ್ದು ತಪ್ಪು. ಆದರೆ ಆ ತಪ್ಪಿಗೂ ಸಮರ್ಥನೆ ಇದೆ. ಗಾಂಧಿ ಅಹಿಂಸಾವಾದಿ. ಗಾಂಧೀಜಿಯ ನಾಯಕತ್ವವನ್ನು ಕಾಂಗ್ರೆಸ್ ಒಪ್ಪಿತ್ತು. ದೇಶದ ಅನುಭವ ಗಾಂಧೀಜಿಯಷ್ಟು ನೇತಾಜಿಗಿರಲಿಲ್ಲ. ನೇತಾಜಿಯ ನಾಯಕತ್ವ ಎಂದರೆ ಸಶಸ್ತ್ರ ಹೋರಾಟದ ಕಡೆಗೆ ಹೋಗುವುದಾಗಿತ್ತು. ಆಗ ಗಾಂಧಿ ಅದು ವರೆಗೆ ಮಾಡಿದ ಸಿದ್ಧತೆಗಳೆಲ್ಲವೂ ನಿಷ್ಫಲವಾಗುತ್ತಿತ್ತು. ನೇತಾಜಿಯವರ ಧೋರಣೆಯನ್ನೆ ಹೊಂದಿದ್ದ ಜವಾಹರಲಾಲ್ ನೆಹರೂ ಅವರೊಂದಿಗೂ ಈ ವಿಚಾರದಲ್ಲಿ ಗಾಂಧೀಜಿಗೆ ಸಂಘರ್ಷ ಇತ್ತು. ಆದರೆ ನೆಹರೂ ಗಾಂಧೀಜಿಯನ್ನು ತೊರೆದು ಹೋಗಲಿಲ್ಲ ಅಷ್ಟೆ.

**ಪ್ರಶ್ನೆ: ಗಾಂಧೀಜಿ ಯಾಕಾಗಿ ಮುಖ್ಯರಾಗುತ್ತಾರೆ?**

**ಉತ್ತರ:** ಭಾರತದ ಅತ್ಯಂತ ಹತಾಶ ದಿನಗಳಲ್ಲಿ ಬಂದವರು ಗಾಂಧೀಜಿ. ಗಾಂಧಿ ಚಿಂತನೆಗಳು ಬಂದ ನಂತರವೇ ಭಾರತದಲ್ಲಿ ಮಾರ್ಕ್ಸ್‌ವಾದ, ಅಂಬೇಡ್ಕರ್‌ವಾದ, ಸಾವರ್ಕರ್‌ವಾದ, ಲೋಹಿಯಾ ವಾದ, ನೆಹರೂ ವಾದ ಎಲ್ಲವೂ ಬಂದವು. ಅಂದರೆ "ಇದಲ್ಲ. ಬೇರೊಂದು ಬೇಕು" ಎಂದು ಅನಿಸಲು ಎಲ್ಲರಿಗೂ ಆಧಾರವಾದದ್ದು ಗಾಂಧೀಜಿಯ ಚಿಂತನೆಯೇ. ಇಡೀ ಜಗತ್ತು ಯುದ್ಧಗಳ ಹಿಂಸೆಯಿಂದ ನಲುಗಿದಾಗ ಗಾಂಧೀಜಿಯ ಅಹಿಂಸೆಗೆ ಮಾನ್ಯತೆ ಬಂತು. ಸರಕಾರ ತೆರಿಗೆ ಏರಿಸಿ ಜನರನ್ನು ಕಿತ್ತು ತಿನ್ನುತ್ತಿದ್ದಾಗ ನಮ್ಮ ಉತ್ಪಾದನೆಯನ್ನು ನಾವೇ ಮಾಡಿಕೊಳ್ಳುತ್ತೇವೆ ಎನ್ನುವ ಗಾಂಧೀಜಿಯವರ ಆರ್ಥಿಕ ಚಿಂತನೆಗಳು ಬಂದವು. ಧರ್ಮವು ಕಂದಾಚಾರ, ಶೋಷಣೆ, ತಾರತಮ್ಯಗಳಲ್ಲಿ ಜಡ್ಡು ಕಟ್ಟಿದ್ದಾಗ ಬಂದ ಸಮಾಜ ಸುಧಾರಕರ ಚಿಂತನೆಗಳನ್ನು ರಾಜಕೀಯಾತ್ಮಕವಾಗಿಯೂ ಕೊಂಡೊಯ್ದು " ಎಲ್ಲ ಜೀವಿಗಳನ್ನೂ ನಿನ್ನಂತೆಯೇ ತಿಳಿ" ಎನ್ನುವ ಈಶಾವಾಸ್ಯ ಉಪನಿಷತ್ತಿನ ಸಾರವನ್ನು ಕೊಂಡೊಯ್ದಯವರು ಗಾಂಧೀಜಿ. ಸುಖದಲ್ಲಿ ಗಾಂಧೀಜಿ ಯಾರಿಗೂ ಬೇಕಾಗುವುದಿಲ್ಲ. ಆದರೆ ಹತಾಶೆಗೆ ತಳ್ಳಲ್ಪಟ್ಟಾಗಲೆಲ್ಲ ಗಾಂಧೀಜಿ ಪ್ರಾಮುಖ್ಯತೆ ಪಡೆಯುತ್ತಾರೆ.

**(ಮಿನುಗು ನೋಟ ಕೃತಿಗೆ ಅರವಿಂದ ಚೊಕ್ಕಾಡಿಯವರ ಪ್ರಸ್ತಾವನೆ)** ■

**ಗಾಂಧೀಜಿಯವರ ಹಾಗೂ ಅವರ ವಿಚಾರಗಳ ಕುರಿತಾಗಿ ಎದ್ದ ಪ್ರಶ್ನೆಗಳಿಗೆ, ಬಿನ್ನಾಭಿಪ್ರಾಯಗಳಿಗೆ, ಟೀಕೆಗಳಿಗೆ ಉತ್ತಿರುಸುವ ಪ್ರಾಮಾಣಿಕ ಪ್ರಯತ್ನವು ಈ ಕೃತಿಯಲ್ಲಿದೆ. ಕಥೆಗಾರರೂ ಸಾಮಾಜಿಕ ಹೋರಾಟಗಾರರೂ ಆಗಿರುವ ಶ್ರೀ ಎಂ. ಜಿ. ಹೆಗಡೆಯವರು ಗಾಂಧೀಜಿಗೆ ಸಂಬಂಧಿಸಿದ ಎಲ್ಲ ದಾಖಲೆಗಳನ್ನು, ಕೃತಿಗಳನ್ನು ಅಧ್ಯಯನ ಮಾಡಿ ರಚಿಸಿರುವ ಈ ಕೃತಿಯು ಅನೇಕ ಪ್ರಶ್ನೆಗಳಿಗೆ ಉತ್ತರ ನೀಡುವ ಪ್ರಯತ್ನವನ್ನು ಮಾಡುವ ಮೂಲಕ ಗಾಂಧೀಜಿಯನ್ನು ಇನ್ನಷ್ಟು ಹೆಚ್ಚಿಗೆ ಅರ್ಥಮಾಡಿಕೊಳ್ಳಲು ನೆರವಾಗಬಹುದು**





# ವಿಜಯಪುರದ ಗಾಂಧಿ ಭವನಕ್ಕೆ ಸಿದ್ದೇಶ್ವರ ಶ್ರೀಗಳ ಭೇಟಿ...

– **ನೇತಾಜಿ ಗಾಂಧಿ,** ವಿಜಯಪುರ

**ಭಾ**ರತ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿ ನೇತಾರ ರಾಷ್ಟಪಿತ ಮಹಾತ್ಮ ಗಾಂಧೀಜಿ ಯವರ ತತ್ವ – ಸಿದ್ಧಾಂತಗಳು ಅವರು ಪ್ರತಿ ಪಾದಿಸಿದ ಮೌಲ್ಯ ಗಳು ವಿಶ್ವಮಾನ್ಯತೆಯನ್ನು ಪಡೆದಿವೆ.

ಅವರು ನಡೆದು ಹೋದ ಶಾಂತಿಯ ಪಥ ಮಾನವ ಜಗತ್ತಿಗೆ ಹೆದ್ದಾರಿಯಾಗಿದೆ .

ಆ ಮಹಾತ್ಮರ ವಿಚಾರ ಧಾರೆಗಳು ಭವಿಷ್ಯದ ಭಾರತಕ್ಕೆ ಭಾಷ್ಯ ಬರೆಯಬೇಕು ಮುಂಬರುವ ಪೀಳಿಗೆಗೆ ಮಾರ್ಗ ದರ್ಶಿಯಾಗಬೇಕೆನ್ನುವ ಸದುದ್ದೇಶದಿಂದ ಕರ್ನಾಟಕದ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ ಗಾಂಧಿ ಭವನಗಳನ್ನು ನಿರ್ಮಿಸಲಾಗಿದೆ. ಐತಿಹಾಸಿಕ ನಗರಿ ವಿಜಯಪುರ ನಗರದಲ್ಲಿ ಕೂಡಾ ಇಂಥ ಗಾಂಧಿ ಭವನ ನಿರ್ಮಾಣವಾಗಿದೆ.

ರಾಜ್ಯದ ಮುಖ್ಯಮಂತ್ರಿಗಳಾದ ಬಸವರಾಜ್ ಬೊಮ್ಮಾಯಿ ಯವರು 2022 ರ ಸೆಪ್ಟೆಂಬರ್ 30 ರಂದು ಗಾಂಧಿ ಭವನವನ್ನು ಲೋಕಾರ್ಪಣೆ ಮಾಡಿದರು.

ಅದಾದ ನಂತರ ಅಕ್ಟೋಬರ್ 2. ರಂದು ವಿಜಯಪುರ ಜಿಲ್ಲಾಡಳಿತವು ಗಾಂಧಿ ಭವನದಲ್ಲಿ ' ವಿಶ್ವ ಅಹಿಂಸಾ ದಿನ ' ವನ್ನು ಅರ್ಥಪೂರ್ಣವಾಗಿ ಆಚರಣೆ ಮಾಡಿತು.

ಈ ಗಾಂಧಿ ಜಯಂತಿ ಕಾರ್ಯಕ್ರಮಕ್ಕೆ ವಿಜಾಪುರದಲ್ಲೇ ನೆಲೆಸಿರುವ ಜ್ಞಾನ ಯೋಗಾಶ್ರಮದ ಸಿದ್ದೇಶ್ವರ ಶ್ರೀಗಳು ಆಗಮಿಸಬೇಕಿತ್ತು. ಆದರೆ ಅನಿವಾರ್ಯ ಕಾರಣಗಳಿಂದ ಅವರು ಬಂದಿರಲಿಲ್ಲ.



ಅದಾಗಿ ಕೆಲವು ದಿನಗಳ ನಂತರ ಜಿಲ್ಲಾಧಿಕಾರಿಗಳ ಒತ್ತಾಸೆಯ ಮೇರೆಗೆ ಶ್ರೀ ಸಿದ್ದೇಶ್ವರ ಶ್ರೀಗಳು ಗಾಂಧಿ ಭವನಕ್ಕೆ ಆಗಮಿಸಿ ಸುಮಾರು ಒಂದೂವರೆ ತಾಸು ತಮ್ಮ ಅಮೂಲ್ಯವಾದ ಸಮಯವನ್ನು ಮಹಾತ್ಮನ ಹೆಸರಿನ ಭವನದಲ್ಲಿ ಕಳೆದರು.

ಅತ್ಯಂತ ಸಮಾಧಾನವಾಗಿ, ಸಾವಧಾನದಿಂದ ಶ್ರೀಗಳು ಭವನದ ಪ್ರತಿ ಕೊಠಡಿಯನ್ನು ವೀಕ್ಷಿಸಿ,ಅಲ್ಲಿ ಸೃಜಿಸಿದ ಬಾಪೂಜಿ ವಿಷಯವನ್ನು ಪರಿಚಯ ಮಾಡಿಕೊಂಡರು. ಭವನದ

ಆರಂಭದಲ್ಲಿ ಮೊಮ್ಮಗ ಕನೂ ಭಾಯ್ ಗಾಂಧಿಯೊಂದಿಗೆ ಬಾಪೂಜಿ ನಡೆದುಕೊಂಡು ಹೋಗುತ್ತಿರುವ ಶಿಲ್ಪವು ಶ್ರೀಗಳ ಗಮನ ಸೆಳೆಯಿತು.

ನಂತರ ಮಹಾತ್ಮನ ಮೂರು ಮಂಗಗಳ ಪ್ರತಿಮೆಗಳನ್ನು ನಿಂತು ತದೇಕಚಿತ್ತರಾಗಿ ನೋಡಿದರು . ತದನಂತರ ಗಾಂಧೀಜಿಯವರ ಏಕಾದಶ ವ್ರತಗಳಲ್ಲಿ ಒಂದಾದ ಅಸ್ಪೃಶ್ಯತಾ ನಿವಾರಣೆಯ ಆಶಯದಂತೆ ತಳ ಸಮುದಾಯದವರನ್ನು ಕೈ ಹಿಡಿದು ಮೇಲೆತ್ತುವ ಸಂಕೇತವಾಗಿ ಕೆಸರಲ್ಲಿ ಬಿದ್ದ ಮಗುವನ್ನು ಬಾಪೂಜಿ ಮೇಲೆತ್ತುವ ಶಿಲ್ಪವನ್ನು ಕಂಡರು.

ಅದರ ಎದುರುಗಡೆ ಬಾಪೂ ಕುಟೀರದಲ್ಲಿರುವ ಅರೆಬೆತ್ತಲೆ ಯಾಗಿ ಕುಳಿತ ಗಾಂಧಿ ಪ್ರತಿಮೆಯನ್ನು ಕಂಡು ಕುಟೀರದ ಹೊರ ಮತ್ತು ಒಳಭಾಗದಲ್ಲಿ ಹಾಕಿರುವ 16 ನುಡಿ ಮುತ್ತುಗಳನ್ನು ಗಮನಿಸಿದರು.

ಕುಟೀರದ ಪಕ್ಕದಲ್ಲಿರುವ 1930 ರ ಐತಿಹಾಸಿಕ ದಂಡಿಯಾತ್ರೆಯ 11 ಶಿಲ್ಪ ಕಲಾ ಕೃತಿಗಳ ಬಗ್ಗೆ ಗಮನ ಹರಿಸಿದರು. ಈ ಎಲ್ಲವುಗಳನ್ನು ನೋಡಿದ ಮೇಲೆ ಭವನದ ಬಾಗಿಲಲ್ಲಿ ನಡೆದು ಬರುತ್ತಿರುವ ನಗು ಮೊಗದ ಮಹಾತ್ಮನ ಆಳೆತ್ತರದ ಭಾವಚಿತ್ರವನ್ನು ನೋಡಿ ಸಂತಸ ವ್ಯಕ್ತ ಪಡಿಸಿದರು.

ಭವನದ ಒಳಗಡೆ ಇರುವ 15 ಎಲ್.ಇ. ಡಿ ಫಲಕಗಳು ಹಾಗೂ ಅದರಲ್ಲಿರುವ ಚುಟುಕು ಮಾಹಿತಿಯನ್ನು ಓದಿದರು.

ಜಗತ್ತಿನ ಶ್ರೇಷ್ಠರಾದ ಅಮೇರಿಕೆಯ ನೀಗ್ರೋ ಹೋರಾಟಗಾರ ಡಾಕ್ಟರ್ ಮಾರ್ಟಿನ್ ಲೂಥರ್ ಕಿಂಗ್ ಜ್ಯುನಿಯರ್, ಸೌತ್ ಆಫ್ರಿಕೆಯ ಮಾನವ ಹಕ್ಕುಗಳ ಹೋರಾಟಗಾರ ನೆಲ್ಸನ್ ಮಂಡೇಲಾ, ಅಮೇರಿಕೆಯ ರಾಷ್ಟ್ರಪತಿ ಬರಾಕ್ ಒಬಾಮಾ, ನೊಬೆಲ್ ವಿಜೇತರಾದ ರೋಮಾ ರೋಲಾ, ಭಾರತದ ಕೊನೆಯ ವೈಸ್ ರಾಯ್ ಲಾರ್ಡ್ ಮೌಂಟ್ ಬ್ಯಾಟನ್, ಜಗತ್ ಖ್ಯಾತಿಯ ವಿಜ್ಞಾನಿ ಆಲ್ಬರ್ಟ್ ಐನ್ ಸ್ಟಿನ್ ಈ ಎಲ್ಲ ಮಹನೀಯರು ಬಾಪೂಜಿ ಬಗ್ಗೆ ಹೇಳಿರುವ ಮೆಚ್ಚುಗೆಯ ಮಾತುಗಳನ್ನು ಓದಿದರು.

1924ನೇ ಇಸ್ವಿಯಲ್ಲಿ ಬೆಳಗಾವಿಯಲ್ಲಿ ಮಹಾತ್ಮಾಜಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನದ ಭಾವಚಿತ್ರಗಳು,

ಗುರುದೇವ ಟ್ಯಾಗೋರ್ ರು ಸತ್ಯಾಗ್ರಹಿ ಗಾಂಧಿಗೆ 'ಮಹಾತ್ಮ' ಎಂದು ಕರೆದ ಸಂದರ್ಭ, ಅವರ ಸ್ವ– ಮಾತುಗಳು,

ನೇತಾಜಿ ಬೋಸ್ ರು 1944ರಲ್ಲಿ ' ರಾಷ್ಟ್ರಪಿತ ' ಎಂದು ಕರೆದು ಗೌರವಿಸಿದ ಸಂದರ್ಭ ಮತ್ತು ಸ್ವ– ಮಾತುಗಳು,ವಿಶ್ವ ಪ್ರಸಿದ್ಧ ಉಪ್ಪಿನ ಸತ್ಯಾಗ್ರಹದ ಅಪರೂಪದ ಭಾವಚಿತ್ರಗಳು, ಕಸ್ತೂರ್ ಬಾ ಮತ್ತು ಸರೋಜಿನಿ ನಾಯ್ಡು ಅವರನ್ನು ಬಂದಿಸಿದ ನವಸಾರಿಯ ಸತ್ಯಾಗ್ರಹ, ಚರಕದಲ್ಲಿ ನೂಲನ್ನು ತೆಗೆಯುತ್ತಿರುವ ಬಾಪೂಜಿಯ ಶಿಲ್ಪ , ಇನ್ನೊಂದು ಕಡೆ ಗಾಂಧಿ ಮತ್ತು ಕಸ್ತೂರ್ ಬಾ ದಂಪತಿಗಳು ಕುಳಿತ ಶಿಲ್ಪಗಳನ್ನು ಕಂಡು ಶ್ರೀಗಳು ಹರ್ಷಿತಗೊಂಡರು.

ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಬಿಜಾಪುರಕ್ಕೆ ಬಾಪೂಜಿ ಬಂದ ಸಂದರ್ಭ ಮತ್ತು ಆ ಕುರಿತು ಬರೆದು ಹಾಕಿದ ಚುಟುಕು ಮಾಹಿತಿಗಳನ್ನು ಓದಿ ಅರಿತುಕೊಂಡರು.

ಗಾಂಧೀಜಿಯವರ ಮಹತ್ವದ ನುಡಿ ಮುತ್ತುಗಳನ್ನು ಓದಿದರು. ಗ್ರಂಥಾಲಯದಲ್ಲಿರುವ ಗಾಂಧೀಜಿಯವರ ಏಕಾದಶ ವ್ರತಗಳು, ಸಾಮಾಜಿಕ ಸಪ್ತ ಪಾತಕಗಳು, 18 ರಚನಾತ್ಮಕ ಕಾರ್ಯಕ್ರಮಗಳು ಹಾಗೂ ಮಹಾತ್ಮನ ಕನಸಿನ ಭಾರತದ ಒಕ್ಕಣಿಕೆ ಹಾಗೂ ಛಾಯಾ ಚಿತ್ರಗಳನ್ನು ನೋಡಿ ಸಂತಸ ಪಟ್ಟರು.

ಭವನದ ಒಂದು ಭಾಗದಲ್ಲಿ ವಿಸ್ತಾರವಾದ ಅಂಗಳ ನಿರ್ಮಿಸಲಾಗಿದೆ.

'ಮೋಹನ್ ದಾಸ್ ಟು ಮಹಾತ್ಮ' ಹೆಸರಿನ ಪ್ರಾಂಗಣದಲ್ಲಿ ಗಾಂಧೀಜಿಯವರ ಬಾಲ್ಯ ಜೀವನ ಹೋರಾಟದ ಬದುಕು,ಜಗತ್ತಿನ ಗಣ್ಯರ ಮಾಹಿತಿಯೂ ಸೇರಿದಂತೆ 100 ಭಾವಚಿತ್ರಗಳನ್ನು ಅಳವಡಿಸಲಾಗಿದೆ. ಅಲ್ಲಿರುವ ಪ್ರತಿಯೊಂದು ಭಾವಚಿತ್ರಗಳನ್ನು ಶ್ರೀ ಗಳು ಓದಿ ಕೊಂಡರು .

ಧ್ಯಾನ ಮಂದಿರದ ' ಹೃದಯಕುಂಜ್ ' ದಲ್ಲಿ ಶ್ರೀಗಳು ಕೆಲ ನಿಮಿಷ ನಿಂತುಕೊಂಡು ಭಗವದ್ಗೀತೆ, ಕನ್ನಡಕ, ಸೊಂಟದಲ್ಲಿ ಸಿಕ್ಕಿಸಿ ಕೊಳ್ಳುತ್ತಿರುವ ವಾಚು ಎಲ್ಲವನ್ನು ವೀಕ್ಷಿಸಿದರು.

ಸುಮಾರು ಒಂದೂವರೆ ತಾಸು ಗಾಂಧಿ ಭವನದಲ್ಲಿ ಕಳೆದ ಶ್ರೀಗಳು ಜಿಲ್ಲಾಡಳಿತದ ಕಾರ್ಯಕ್ಕೆ ಮೆಚ್ಚುಗೆ ವ್ಯಕ್ತ ಪಡಿಸಿದರು.

ಈ ಸಂದರ್ಭದಲ್ಲಿ ಜಿಲ್ಲಾಧಿಕಾರಿ ಗಳಾದ ಡಾ.ವಿಜಯ್ ಮಹಾಂತೇಶ್ ದಾನಮ್ಮನವರ್ ಹಾಗೂ ಗಾಂಧಿ ಪ್ರೇಮಿ ನೇತಾಜಿಗಾಂಧಿ, ನಿರ್ಮಿತಿ ಕೇಂದ್ರದ ಸುರಕೋಡ್, ಅರವಿಂದ, ದಾನಿ, ರಾಜಶೇಖರ, ಶೇಡಶ್ಯಾಳ ಸೇರಿದಂತೆ ಶ್ರೀಗಳ ಅನುಯಾಯಿಗಳು ಜೊತೆಗಿದ್ದರು .

# ಹೆಂಗರುಳಿನ ಗಾಂಧಿ...



**ನಾ**ನು ಒಂದು ಬಗೆಯ ದರ್ಪದ ಮನುಷ್ಯನಾಗಿದ್ದೆ. ಹೆಂಡತಿಯ ಮೇಲೆ ಸಿಟ್ಟಿನಿಂದ ಕೂಗಾಡುತ್ತಿದ್ದೆ. ನನ್ನೊಂದಿಗೆ ತಗ್ಗಿ ಬಗ್ಗಿ ನಡೆದುಕೊಳ್ಳುವುದು ನನ್ನ ಹೆಂಡತಿಯ ಕರ್ತವ್ಯ ಎಂದು ನಾನು ಭಾವಿಸಿದ್ದೆ. ಕಸ್ತೂರಬಾ ಪಾಲಿಗೆ ನಾನು ರೇಜಿಗೆಯ ನರಕವನ್ನೇ ಸೃಷ್ಟಿ ಮಾಡ್ಡಿದ್ದೆನೆಂದು ತೋರುತ್ತದೆ. ಮನಸ್ಸಿಗೆ ಬಂದಾಗಲೆಲ್ಲಾ ನಾವು ತಂಗಿರುತ್ತಿದ್ದ ಮನೆಯನ್ನು ಬಿಡಿಸಿ ಇನ್ನೊಂದು ಬಾಡಿಗೆ ಮನೆಯಲ್ಲಿ ಬಿಡಾರ ಹೂಡಿಸುತ್ತಿದ್ದೆ. ನನ್ನ ಹೆಂಡತಿಯಾದವಳು ಇಂತಿಂಥ ಬಟ್ಟೆ ಬರೆಯನ್ನು ಹಾಕಿಕೊಳ್ಳಬೇಕು ಎಂದು ಕಟ್ಟು ನಿಟ್ಟಾಗಿ ಸೂಚಿಸುತಿದ್ದೆ.

ಕಸ್ತೂರಬಾ ಸಂಪ್ರದಾಯ, ಮಡಿ ಇತ್ಯಾದಿಗಳನ್ನು ಪಾಲಿಸುತ್ತಿದ್ದ ಮನೆಯಿಂದ ಬಂದವಳು. ಅಸ್ಪಶ್ಯತೆಯ ಆಚರಣೆ ತಪ್ಪು ಎಂದೇನೂ ಆಕೆ ಭಾವಿಸಿರಲಿಲ್ಲ. ನಮ್ಮ ಮನೆಗೆ ಮುಸ್ಲಿಮರು, ಅಸ್ಪೃಶ್ಯರು ಭೇಟಿ ಕೊಡುವುದು ಸಾಮಾನ್ಯವಾಗಿತ್ತು, ಆಕೆಯ ಪ್ರತಿರೋಧದ ನಡುವೆಯೂ ನಾವು ಮುಸ್ಲಿಮರಿಗೆ, ಅಸ್ಪೃಶ್ಯರಿಗೆ ಆಕೆಯ ಕೈಯಿಂದಲೇ ಊಟೋಪಚಾರ ನಡೆಯುವ ಹಾಗೆ ನೋಡಿಕೊಂಡೆ.

ನಾನು ಕೊಡುತಿದ್ದ ಸೂಚನೆಗಳನ್ನು ಆಕೆ ಎಂದು ತಿರಸ್ಕರಿಸಲಿಲ್ಲ. ಅಷ್ಟಾಗಿ ವಿದ್ಯಾವಂತಳಾಗಿರದಿದ್ದರೂ ಅನುಕೂಲಗಳಿಗಾಗಿ ಎದುರು ನೋಡದೆ, ಇದ್ದುದರಲ್ಲೇ ಸರಳವಾಗಿ ಬದುಕು ನಡೆಸುವುದು ಆಕೆಗೆ ಗೊತ್ತಿತ್ತು. ಆಕೆ ಗೊಣಗದೆ, ಎದುರಾಡದೆ ನನ್ನ ಆಟಾಟೋಪವನ್ನೆಲ್ಲಾ ಸಹಿಸಿಕೊಳ್ಳುತ್ತಿದ್ದಳು.

ಆಕೆಯ ತಾಳ್ಮೆ, ಸೌಮ್ಯ ಸ್ವಭಾವ ನನ್ನ ಮೇಲೆ ಪರಿಣಾಮ ಬೀರತೊಡಗಿದವು. ಕಪಟವಲ್ಲದ ಆಕೆಯ ನಡೆ ನುಡಿ ನನ್ನ ಮನಸ್ಸನ್ನು ಗೆದ್ದವು. ನಿಧಾನಕ್ಕೆ ಗಂಡನಾದವನು ಹೆಂಡತಿಯ ಜೊತೆ ದಬ್ಬಾಳಿಕೆಯಿಂದ ನಡೆದುಕೊಳ್ಳುವುದು ತರವಲ್ಲವೆಂದು ನನಗೆ ಅನಿಸಲು ಶುರುವಾಯಿತು. ನನ್ನ ಮಾತನ್ನು ನಡೆಸಿಕೊಡುವಂತೆ ಒತ್ತಾಯಿಸುವುದಕ್ಕಿಂತ, ಆಕೆಗೇ ಆ ಕುರಿತು ಮನವರಿಕೆಯಾಗುವಂತೆ ಮಾಡುವುದು ಒಳ್ಳೆಯದೆಂದು ತೋರಿತು.

ಅಹಿಂಸೆಯ ದಾರಿಯಲ್ಲಿ ನಡೆಯಲು ಒತ್ತಾಸೆಯಾಗಿದ್ದರಿಂದ ಕಸ್ತೂರಬಾ ಕ್ರಮೇಣ ನನಗೆ ಗುರುವಾದಳು. ನನಗೆ ಆಕೆಗಿಂತ ನಂಬಿಕಸ್ತ, ನಿಷ್ಠಾವಂತ ಸಂಗಾತಿ ದೊರೆಯುವುದು ಸಾಧ್ಯವಿರಲಿಲ್ಲ ಎಂದು ಆಣೆ ಮಾಡಿ ಬೇಕಾದರೆ ಹೇಳಬಲ್ಲೆ

**(1934 ರ ಅಕ್ಟೋಬರ್ 23 ರಂದು ಪಖ್ತೂನ್ ಪ್ರಾಂತದ ಹುನ್ನೂವಿನಲ್ಲಿ ಲಿಂಗ ಸಮಾನತೆಯ ಪ್ರಶ್ನೆಗಳಿಗೆ ಉತ್ತರಿಸುತ್ತ ಆಡಿದ ಮಾತುಗಳು)**

# ನಿನಗೊಂದು ತಾಯತ ಕೊಡುತ್ತೇನೆ

ನಿನಗೊಂದು ತಾಯತ ಕೊಡುತ್ತೇನೆ
ನಿನಗೆ ಅನುಮಾನವಿದ್ದಾಗ
ನಿನ್ನಲ್ಲಿ ನೀನೇ ಅತಿಯಾಗಿ ಮುಳುಗಿ ಹೋಗಿದ್ದಾಗ
ನಿನಗೆ ನೀನೇ ಈ ಪರೀಕ್ಷೆ ಮಾಡಿಕೋ;
ನೀನು ನೋಡಿರುವ ಕಡುಬಡವನನ್ನು,
ಅತ್ಯಂತ ದುರ್ಬಲ ಮನುಷ್ಯನನ್ನು ನೆನಸಿಕೋ;
ಬಳಿಕ ನಿನ್ನನ್ನು ನೀನೇ ಕೇಳಿಕೋ;

ನೀನೀಗ ಇಡಬೇಕೆಂದುಕೊಂಡಿರುವ ಹೆಜ್ಜೆಯಿಂದ
ಅವನಿಗೆ ಏನಾದರೂ ಉಪಯೋಗವಿದೆಯೆ ?
ಅವನು ಈ ಹೆಜ್ಜೆಯಿಂದ ಏನನ್ನಾದರೂ ಪಡೆಯಬಲ್ಲನೇ ?
ಈ ಹೆಜ್ಜೆ ಅವನಲ್ಲಿ ತನ್ನ ಬದುಕಿನ ಮೇಲೆ, ನನ್ನ ವಿಧಿಯ ಮೇಲೆ
ನಿಯಂತ್ರಣ ಸಾಧಿಸುವಂಥ ಶಕ್ತಿ ತುಂಬಬಲ್ಲದೆ ?

ಅಂದರೆ, ನೀನು ಇಡಬೇಕೆಂದಿರುವ ಈ ಹೆಜ್ಜೆ
ಹಸಿದವರಿಗೆ ಹಾಗೂ ಚೈತನ್ಯ ಬತ್ತಿದ ಲಕ್ಷಾಂತರ ಜನರಿಗೆ
ಸ್ವರಾಜ್ಯ ತಂದುಕೊಡಬಲ್ಲದೆ ?

ಈ ಪ್ರಶ್ನೆಗಳಿಗೆ ನಿನಗೆ ನೀನೇ ಕೇಳಿಕೊಂಡರೆ ಸಾಕು;
ನಿನ್ನಲ್ಲ ಅನುಮಾನಗಳೂ
ನಿನ್ನಲ್ಲಿ ನೀನೇ ಮುಳುಗಿಹೋಗುವ ಆತ್ಮವ್ಯಸನವೂ
ಕರಗಿ ಹೋಗುವುದನ್ನು ನೀನೇ ಕಾಣುವೆ.

**–ಮಹಾತ್ಮ ಗಾಂಧೀಜಿ**
(ಅನುವಾದ : ಡಾ. ನಟರಾಜ್ ಹುಳಿಯಾರ್)



ರೇಖಾಚಿತ್ರ : ಎಂ ಎಸ್ ಮೂರ್ತಿ



# ಜಗದಗಲ ಗಾಂಧಿ...

## ಗಾಂಧಿ ಜೊತೆ ಅವಧಿ ಸ್ಪೆಷಲ್

'ಒಂದ್ನಿಮಿಷ ಬರ್ತೀನಿ ಇರಿ' ಎಂದು ಟೆಡ್ ಟರ್ನರ್ ತಮ್ಮ ಖಾಸಗಿ ಕೋಣೆ ಹೊಕ್ಕರು.

ಜಗತ್ತಿಗೆ ಜಗತ್ತೇ ನಿಬ್ಬೆರಗಾಗುವಂತೆ ಟೆಡ್ ಟರ್ನರ್ ಬೆಳೆದು ನಿಂತು ಬಿಟ್ಟಿದ್ದರು.

ಮನೆಯ ಮೂಲೆಯಲ್ಲಿ ಕಣ್ಣೀರು ಉಕ್ಕಿಸುವ , ಹ ಹ ಹಾ ಎಂದು ಲಾಫರ್ ಕ್ಲಬ್ ಗಳಂತೆ ನಗಿಸುವ ವಸ್ತುವಾಗಿದ್ದ ದೂರದರ್ಶನ ಈಗ ಅಫೀಮಿನಂತೆ ಆಗಿ ಹೋಗಿತ್ತು.

ಟೆಡ್ ಟರ್ನರ್ ಕೊಲ್ಲಿ ಯುದ್ಧಕ್ಕೆ ಆಂಟೆನಾ ಜೋಡಿಸಿದ್ದೇ ತಡ ಜಗತ್ತು ಟೆಲಿವಿಷನ್ ಎಂಬ ಮಾಯಾ ಜಿಂಕೆಯ ಬೆನ್ನ ಹಿಂದೆ ಬಿತ್ತು.

ಮತ್ತೆ ಬಾಗಿಲು ತೆರೆದು ಟೆಡ್ ಟರ್ನರ್ ನಮ್ಮ ಮುಂದೆ ನಿಂತಾಗ ಅವರ ಕೈಯಲ್ಲಿ ಒಂದು ಪುಟ್ಟ ಪ್ರತಿಮೆ.

ಟೆಡ್ ಜೊತೆ ಲೋಕಾಭಿರಾಮವಾಗಿ ಹರಟೆ ಕೊಚ್ಚುತ್ತಾ 'ನಿಮಗೆ ತೀರಾ ಇಷ್ಟವಾದವರು ಯಾರು? ಜೇನ್ ಫಾಂಡಾಳನ್ನು ಬಿಟ್ಟರೆ..' ಅಂತ ಕೇಳಿದ್ದೆ.

ಅದಕ್ಕೆ ಉತ್ತರವಾಗಿ ಟೆಡ್ ಈ ಪ್ರತಿಮೆ ಹಿಡಿದು ನಿಂತಿದ್ದರು.

'ವಾಹ್, ಗಾಂಧಿ!' ಅಂತ ಆಶ್ಚರ್ಯದ ಉದ್ಗಾರ ಹೊರಟಿದ್ದು ನನ್ನಿಂದ ಮಾತ್ರವಲ್ಲ ಪಕ್ಕದಲ್ಲಿಯೇ ಚಿಲಿ, ದಕ್ಷಿಣ ಆಫ್ರಿಕಾ, ಸ್ಲೋವೇನಿಯಾ. ಜೆಕ್, ಜರ್ಮನಿ, ಕೀನ್ಯಾ, ಕೊರಿಯಾ, ಜಪಾನ್, ಆಸ್ಟ್ರೇಲಿಯಾ ದೇಶದ ಎಲ್ಲರ ಬಾಯಿಂದಲೂ ಈ ಉದ್ಗಾರ ಹೊರಬಿತ್ತು.

ಇನ್ನೇನು ಸಿ ಎನ್ ಎನ್ ಕಚೇರಿಯಿಂದ ಬೀಳ್ಕೊಳ್ಳಲು ಎರಡೇ ಎರಡು ದಿನ ಬಾಕಿ ಇತ್ತು.

ಅಟ್ಲಾಂಟಾದ ಮೂಲೆ ಮೂಲೆಯನ್ನೆಲ್ಲಾ ಜಾಲಾಡಿಬಿಡೋಣಾ ಎಂದು ದಂಡು ಕಟ್ಟಿ ಹೊರಟಿದ್ದು ಮಾರ್ಟಿನ್ ಲೂಥರ್ ಕಿಂಗ್ ನೆನಪಿನ ಮನೆಗೆ.

ಇನ್ನೂ ಕಾಂಪೌಂಡ್ ಒಳಗೆ ಕಾಲಿಟ್ಟಿರಲಿಲ್ಲ. ಅಲ್ಲಿ ಆಳೆತ್ತರದ ಪ್ರತಿಮೆ– ಅದು ಗಾಂಧಿ.

ನನ್ನ ಜೊತೆಯಲ್ಲಿಯೇ ಹೆಜ್ಜೆ ಹಾಕುತ್ತಿದ್ದ ದಕ್ಷಿಣ ಆಫ್ರಿಕಾದ ನೋಕ್ವಾಸಿ ಶಬಲಾಲ ಓಡಿಹೋಗಿ ಆ ಗಾಂಧಿಯ ಕೆನ್ನೆಗೊಂದು ಮುತ್ತು ತೂರಿದಳು. ನನ್ನ ಕ್ಯಾಮೆರಾ 'ಕ್ಲಿಕ್' ಎಂದಿತು.

ಶಾಪ್ ಹಾಪಿಂಗ್ ಮಾಡುತ್ತಾ ಮಾಡುತ್ತಾ ಸಮಯ ರಾತ್ರಿ ಮೂರರ ಗಡಿ ದಾಟಿತ್ತು. ಗೆಳೆಯರ ಜೊತೆ ಇನ್ನೂ ಸುತ್ತುವುದಕ್ಕೆ ನಾನು ಸಿದ್ದನಿರಲಿಲ್ಲ. ಎಲ್ಲರಿಗೂ ಒಳ್ಳೆಯ ಹಗ್ ಕೊಟ್ಟು 'ಗುಡ್ ಬೈ' ಹೇಳಿದೆ. 'ಹುಷಾರು, ಇದು ಆಮೇರಿಕಾ, ಒಬ್ಬನೇ ಹೋಗುತ್ತಿದ್ದೀಯಾ' ಎಂದು ಜೆಕ್ ಗೆಳೆಯ ಮೆರೆಕ್ ಬ್ರಾಡ್ಸ್ಕಿ ಪಿಸುಗಟ್ಟಿದ.

ಭಾರತದಿಂದ ಹೊರಡುವಾಗಲೂ ಎಲ್ಲರದ್ದೂ ಇದೇ ಕಿವಿಮಾತು ಟ್ಯಾಕ್ಸಿ ಏರಿದೆ. ಜೇಬಿನಲ್ಲಿದ್ದ ಪಾಸ್ ಪೋರ್ಟ್, ಡಾಲರ್ ಗಳ ಮೇಲೆ ಎರಡಲ್ಲ, ಹತ್ತು ಕಣ್ಣಿಟ್ಟಿದ್ದೆ.

ರೊಯ್ರಂನೆ ಬೀದಿ ಬೀದಿ ಸುತ್ತಿದ ಟ್ಯಾಕ್ಸಿ ನನ್ನ ಹೋಟಲ್ ಮುಂದೆ ನಿಂತಿತ್ತು. ಟ್ಯಾಕ್ಸಿ ಮೀಟರ್, ಅದಕ್ಕೆ ಹತ್ತು ಪರ್ಸೆಂಟ್ ಟಿಪ್ಸ್ ಸೇರಿಸಿ ಡ್ರೈವರ್ ಕೈಗಿಟ್ಟೆ.

ನಾನು ಟಿಪ್ಸ್ ಎಂದು ಕೊಟ್ಟ ಹತ್ತು ಡಾಲರ್ ನೋಟನ್ನು ಆತ ನನ್ನ ಕೈಗೇ ತುರುಕಿದ.

ಯಾಕೆ ಎಂದು ಕೇಳಿದೆ. 'ಗಾಂಧಿ?' ಅಂತ ಕೇಳಿದ .

ನಾನು 'ಯಸ್, ಇಂಡಿಯಾ' ಎಂದೆ. ಕೈ ಬೀಸುತ್ತಾ ಹೊರಟೇ ಬಿಟ್ಟ.

ಗೆಳತಿ ನೇಮಿಚಂದ್ರ ಪೆರುವಿನ ಪವಿತ್ರ ಕಣಿವೆಗಳನ್ನು ಹುಡುಕುತ್ತಾ ದಕ್ಷಿಣ ಅಮೆರಿಕಾ ಹೊಕ್ಕಿದ್ದರು.

ಕಬ್ಬಿಣದ ಅಂಗಡಿಯಲ್ಲಿ ನೊಣಕ್ಕೇನು ಕೆಲಸ? ಎಂಬಂತೆ ಸ್ಪಾನಿಷ್ ನೆಲದಲ್ಲಿ ಇಂಗ್ಲಿಷ್ಗೇನು ಕೆಲಸ? ಹೇಗಪ್ಪಾ ಇಲ್ಲಿನವರ ಜೊತೆ ಮಾತಾಡುವುದು ಎಂದು ನೇಮಿ ಕಕ್ಕಾಬಿಕ್ಕಿಯಾಗಿದ್ದರು.

ಆದರೆ, ಅದು ಕೆಲವೇ ಕ್ಷಣ ಅಷ್ಟೆ. ಜನ ಅವರನ್ನು ಮುತ್ತಿಕೊಳ್ಳತೊಡಗಿದ್ದರು. ಎಲ್ಲರ ಬಾಯಲ್ಲೂ 'ಗ್ಯಾಂಡಿ' ಪದ. ಗೊತ್ತಿಲ್ಲದ ದೇಶದಲ್ಲಿ ಗಾಂಧಿ ಮಾತು ಕೂಡಿಸುವ ಸೇತುವೆಯಾಗಿ ಹೋಗಿದ್ದರು.

ಅದೆಲ್ಲಾ ಬಿಡಿ, ಒಬ್ಬ ಪುಟ್ಟ ಹುಡುಗಿ ಬರಾಕ್ ಒಬಾಮಾಗೆ ಪ್ರಶ್ನೆ ಎಸೆದಳು. 'ನೀವು ಔತಣ ಕೂಟ ಏರ್ಪಡಿಸಿದರೆ ಅದಕ್ಕೆ ಆಹ್ವಾನಿಸಬೇಕೆಂದು ಬಯಸುವವರ ಪೈಕಿ ಮೊದಲು ಯಾರು ನಿಲ್ಲುತ್ತಾರೆ?'.

ಒಬಾಮ ಒಂದು ಕ್ಷಣವೂ ತಡಮಾಡದೆ ಹೇಳಿದರು– ಗಾಂಧಿ.

ಅಮೇರಿಕಾದಿಂದ ಬೀಳ್ಕೊಡುವಾಗ ನೆನಪಿಗೆಂದು ನಾನು



ಇಲ್ಲಿಂದ ಕೊಂಡೊಯ್ದಿದ್ದ ಗಣೇಶನನ್ನು ಕೈಗಿಡುತ್ತಿದ್ದೆ. ತಕ್ಷಣ ಅವರು ಇನ್ನೊಂದು ಕೈಯನ್ನೂ ಚಾಚುತ್ತಿದ್ದರು. 'One Gandhi please…' ಎನ್ನುತ್ತಿದ್ದರು.

ನನಗೆ 'ಡೆಕ್ಕನ್ ಹೆರಾಲ್ಡ್'ನಲ್ಲಿ ರಾಮಮೂರ್ತಿ ಬರೆದ ಕಾರ್ಟೂನ್ ನೆನಪಿಗೆ ಬಂತು. ಅಪ್ಪ, ಮಗ ಗಾಂಧಿ ಪ್ರತಿಮೆಯ ಮುಂದೆ ಹಾದು ಹೋಗುತ್ತಿದ್ದಾರೆ.

ಪ್ರತಿಮೆ ತೋರಿಸಿ ಮಗ ಅಪ್ಪನಿಗೆ ಕೂಗಿ ಹೇಳ್ತಿದಾನೆ– 'ಅಪ್ಪಾ ಬೆನ್ ಕಿಂಗ್ಲೆ' ರಿಚರ್ಡ್ ಆಟೆನ್ ಬರೋ ನಿರ್ದೇಶಿಸಿದ ಆಸ್ಕರ್ ಪ್ರಶಸ್ತಿ ವಿಜೇತ ಚಿತ್ರ 'ಗಾಂಧಿ' ಸಿನಿಮಾದಲ್ಲಿ ಗಾಂಧಿ ಪಾತ್ರ ಮಾಡಿದ ನಟ ಬೆನ್ ಕಿಂಗ್ಲೆ. ಇವತ್ತು ಗಾಂಧಿಗೂ ಬೆನ್ ಕಿಂಗ್ಲೆಗೂ ಇರುವ ಗೆರೆಯೇ ಅಳಿಸಿಹೋಗುತ್ತಿದೆ.

ಎಚ್ ನಾಗವೇಣಿ ಬರೆದ 'ಗಾಂಧಿ ಬಂದ' ನನ್ನನ್ನು ಮತ್ತೆ ಮತ್ತೆ ಸೆಳೆದು ಕೊಳ್ಳುವ ಕೃತಿ. ಅಂದಿನ 'ಕನ್ನಡ' ಜಿಲ್ಲೆಗೆ ಗಾಂಧಿ ಬಂದ ಹಿನ್ನೆಲೆಯಲ್ಲಿ ಬಿಚ್ಚಿಕೊಳ್ಳುತ್ತಾ ಹೋಗುವ ಕಥನ ಇದು.

ಗೊತ್ತಿಲ್ಲದ ಒಬ್ಬ ಗಾಂಧಿ ಎಲ್ಲಿಯೋ ಇರುವವರನ್ನು ಬದಲಿಸುತ್ತಾ ಹೋಗುತ್ತಾನೆ. 'ಗಾಂಧಿ ಬಂದ' ಎಂಬ ಹೆಸರಿಡುವ ಮುನ್ನ ಕಲಾವಿದ ಸುದೇಶ್ ಮಹಾನ್ ಕಾದಂಬರಿಗೆ 'ಮಾಯಿದ ಪುರುಷೆ' ಎನ್ನುವ ಹೆಸರಿಡಬೇಕು ಎಂದು ನಾಗವೇಣಿಯ ಜೊತೆ ವಾದ ಮಾಡುತ್ತಾ ಇದ್ದ.

ಮಾಧ್ಯಮ ಲೋಕದ ಬಹುದೊಡ್ಡ ಥಿಯರಿ "medium is the message" ಎನ್ನುವುದು ನೆನಪಿಗೆ ಬಂದಾಗ . ಹೌದಲ್ಲಾ ಗಾಂಧಿ ಎಂಬ ಗಾಂಧಿ ತಾವೇ ಒಂದು ಸಂದೇಶವಾಗಿ ಬದುಕಿಬಿಟ್ಟರು.

'ಲಂಕೇಶ್ ಪತ್ರಿಕೆ' ಮಾರುಕಟ್ಟೆಗೆ ಬಂದಾಗ ನಮಗೆಲ್ಲಾ ಆಶ್ಚರ್ಯವಾಗಿ ಹೋಗಿತ್ತು. ಜಾಹಿರಾತು ಇಲ್ಲದೆ ಬದುಕುವುದಕ್ಕೆ ಸಾಧ್ಯವೇ ಎನ್ನುವ ಪ್ರಶ್ನೆ ಕುಣಿದಾಡುತ್ತಿತ್ತು. ಏನೇ ಬರಲಿ, ಜಾಹಿರಾತು ನನ್ನ ಪತ್ರಿಕೆಯಲ್ಲಿರುವುದಿಲ್ಲ ಎಂದು ಲಂಕೇಶ್ ಘೋಷಿಸಿ ಕುಳಿತಿದ್ದರು.

ಜಾಹಿರಾತಿಲ್ಲದೆ ಒಂದು ಪತ್ರಿಕೆ ನಡೆಸಲು ಸಾಧ್ಯ ಎಂಬುದನ್ನು ಗಾಂಧಿ ತೋರಿಸಿಕೊಟ್ಟಿದ್ದರು ಎಂಬುವುದು ಅರ್ಥವಾಗುತ್ತಿರುವುದು ಈಗ.

ಗಾಂಧೀಜಿಗೆ ವೈದ್ಯರೊಬ್ಬರು ಬೆಡ್ ರೆಸ್ಟ್ ಹೇಳಿದರು. ಮಲಗಿ ಸಾಕಾದ ಗಾಂಧೀಜಿ ಪತ್ರಿಕೆಯ ಪ್ರಬಂಧ, ಜಾಹಿರಾತು ತಿರುವಿಹಾಕುತ್ತಾ ಹೋದರು. ಜಾಹಿರಾತಿನ ಬಗ್ಗೆ ಅವರ ಅಸಹನೆ ಎಷ್ಟು ಹೆಚ್ಚುತ್ತಾ ಹೋಯಿತೆಂದರೆ 'ಅಯೋಗ್ಯ ಜಾಹಿರಾತು' ಅನ್ನುವ ಸಂಪಾದಕೀಯವನ್ನೇ ಬರೆದರು.

ಗಾಂಧಿಯವರ ವಾದ ಇಷ್ಟೆ. ಯೋಗದ ಪುಸ್ತಕ ಅಂತ ಜಾಹಿರಾತು ಕೊಡುತ್ತಾರೆ, ಆದರೆ ಆ ಪುಸ್ತಕ ಪಟ್ಟಿ ನೋಡಿದರೆ ಅಲ್ಲಿರೋದು ಒಂದೇ ಒಂದು ಯೋಗದ ಪುಸ್ತಕ. ಇನ್ನುಳಿದದ್ದೆಲ್ಲಾ ಸೆಕ್ಸ್ ಬುಕ್‌ಗಳು ಅನ್ನೋ ಆಕ್ರೋಶ ಅವರದ್ದು. ಇದನ್ನೆಲ್ಲಾ ನನ್ನ ಪತ್ರಿಕೆಗೆ ಹೇಗೆ ತರಲಿ ಅನ್ನೋ ತಲೆ ಬಿಸಿ ಅವರದ್ದು.

ಗಾಂಧಿಗೆ ಪತ್ರಿಕೋದ್ಯಮ ಅನ್ನೋದು ಬರಿ ಪತ್ರಿಕೋದ್ಯಮ ಆಗಿರಲಿಲ್ಲ. ಅವರೇ ಹೇಳಿಕೊಳ್ಳುವ ಪ್ರಕಾರ ಅದು ಅವರ ಆತ್ಮದ ತಳಮಳಕ್ಕೆ ನೀಡಿದ ಅಕ್ಷರ ರೂಪವಾಗಿತ್ತು.

ಗಾಂಧಿಗೆ ಗಾಂಧಿಯನ್ನು ನೋಡಿಕೊಳ್ಳುವ ಒಂದು ಕನ್ನಡಿಯಾಗಿ ಅದು ರೂಪುಗೊಳ್ಳುತ್ತಿತ್ತು. ಗಾಂಧಿ ಪತ್ರಿಕೆಗೆ ಬರೆಯುತ್ತಲೇ ತಮ್ಮ ದೌರ್ಬಲ್ಯಗಳನ್ನೂ ಕಂಡುಕೊಳ್ಳುತ್ತಾ ಹೋದರು.

ಪತ್ರಿಕೆ ಎನ್ನುವುದು ಒಂದು ಉದ್ಯಮ ಆಗುವುದೇ ಗಾಂಧಿಗೆ ಸರಿ ಬರದ ವಿಚಾರವಾಗಿತ್ತು. Journalism should never be prostituted for selfish ends or for the sake of carrying livelihood ಅಂದಿದ್ದರು.

ಭಾರತದ ಪತ್ರಿಕೋದ್ಯಮ ಅಂದರೆ ಬ್ರಿಟಿಷರು ಕಿಸಕ್ಕನೆ ನಗುವ ಪರಿಸ್ಥಿತಿ ಇತ್ತು. ಭಾರತದ ಪತ್ರಿಕೆ ಓದಿದರೆ ಅರೇಬಿಯನ್ ನೈಟ್ಸ್ ಕಥೆ ಓದಿದ ಹಾಗಿರುತ್ತದೆ ಅಂತ ಬ್ರಿಟನ್ನಿನ ಪ್ರಧಾನಿ ಬೆಂಜಮಿನ್ ಡಿಸ್ರೇಲಿ ನಗಾಡಿದ್ದ.

ಅಂತಹ ಕಾಲದಲ್ಲೇ ಗಾಂಧಿ ಪತ್ರಿಕೆಯ ಅಂಗಳ ಪ್ರವೇಶಿಸಿದರು. ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಬರುವಾಗ ಗಾಂಧಿ ರೈಲು ಡಬ್ಬಿಯಿಂದ ಬಿಳಿಯರು ಎಸೆದ ಸೂಟ್ ಕೇಸನ್ನು ಮಾತ್ರ ಹೊತ್ತು ತರಲಿಲ್ಲ. ಪ್ರತಿಭಟನೆಯ ಕಿಚ್ಚನ್ನೂ, ಪತ್ರಿಕೆ ಎಂಬ ಕಂದೀಲನ್ನೂ ಹಿಡಿದುಕೊಂಡೇ ಬಂದರು.

ಯಂಗ್ ಇಂಡಿಯಾ ಕೈಗೆತ್ತಿಕೊಂಡರು. ನವ ಜೀವನ, ಸತ್ಯಾಗ್ರಹಿ, ಹರಿಜನ, ಹರಿಜನ ಬಂಧು, ಹರಿಜನ ಸೇವಕ ಹತ್ತು ಭಾಷೆಯನ್ನು ಆವರಿಸಿ ನಿಂತರು. ಅಷ್ಟೇ ಅಲ್ಲ, ಏನಿಲ್ಲೆಂದರೂ ಐದು ದಶಕ ಅವರಿಗೆ ಪತ್ರಿಕೆ ಇನ್ನೊಂದು ಊರುಗೋಲೇ ಆಗಿಹೋಗಿತ್ತು.

ಪತ್ರಿಕೆಗೆ ಒಂದು ಎಥಿಕ್ಸ್ ಇರ್ಬೇಕು ಅನ್ನೋದು ಗಾಂಧಿಯವರಿಗೆ ಗೊತ್ತಾಗಿತ್ತು. 'ಜಾಹೀರಾತಿಲ್ಲದೆ ಪತ್ರಿಕೆ ನಡೆಸೋದಕ್ಕಾಗಲ್ಲ ಅಂತ ಸುಳ್ಳು ಹೇಳೋ ಜಾಹೀರಾತೆಲ್ಲಾ ಹಾಕೋದಿಕ್ಕೆ ಆಗುತ್ತಾ. ಒಂದಿಷ್ಟು ನೀತಿ ನಿಯಮ ಇರ್ಬೇಕು, ಪತ್ರಕರ್ತರ ಸಂಘಗಳು ನಿಬಂಧನೆ ಮಾಡ್ಬೇಕು' ಅಂತಿದ್ರು.

ಸಂತೋಷ್ ಕುಮಾರ್ ಗುಲ್ವಾಡಿ ಅವರ ಪುಸ್ತಕ ತೆಗೆದು ನೋಡಿ. ಗಾಂಧಿ ಹೇಳಿದರಂತೆ– 'ಪತ್ರಕರ್ತರು ನಡೆದಾಡೋ ಪ್ಲೇಗ್ನಂತ ಮಹಾರೋಗಿಗಳು. ಪತ್ರಿಕೆಗಳು ಬೈಬಲ್, ಕುರಾನ್, ಗೀತೆ ಎಲ್ಲವನ್ನೂ ಒಂದರಲ್ಲೇ ಅಳವಡಿಸೋ ಕೃತಿಗಳಾಗಿವೆ. ಇಷ್ಟರಲ್ಲೇ ರಾಜಕೀಯ ದೊಂಬಿಯಾಗಲಿದೆ ಅಂತ ಪತ್ರಿಕೆಗಳಲ್ಲಿ ಪ್ರಕಟವಾದರೆ ದೆಹಲಿಯಲ್ಲಿರುವ ಎಲ್ಲಾ ಕತ್ತಿ, ಬಾರುಕೋಲುಗಳು ಕ್ಷಣ ಮಾತ್ರದೊಳಗೆ ಮಾರಾಟವಾಗುತ್ತವೆ. ಜನರು ಧೈರ್ಯಶಾಲಿಗಳಾಗಬೇಕೆಂದು ಪತ್ರಿಕೆಗಳು ಕಲಿಸಿಕೊಡಬೇಕೇ ಹೊರತು ಅವರಲ್ಲಿ ಭಯವನ್ನು ಹುಟ್ಟಿಸುವುದಲ್ಲ'.

ಕಾಲೇಜಿನಲ್ಲಿದ್ದಾಗ ನಮ್ಮ ನಡುವೆ ಒಂದು ಹಾಡು ಭಾರೀ ಪಾಪ್ಯುಲರ್ ಆಗಿತ್ತು. 'ಗಾಂಧಿ ಹೇಳಿಕೊಟ್ಟ ಪಾಠ, ಗುರುವಿಗೆ ತಿರುಮಂತ್ರ ಮಾಟ, ಸತ್ಯಾಗ್ರಹ– ಸ್ಟ್ರೈಕ್, ಸ್ಟ್ರೈಕ್, ಸ್ಟ್ರೈಕ್,' ಅಂತ ಹೇಳಿ ಸ್ಟ್ರೈಕ್‌ಗೆ ಇಳೀತಿದ್ವಿ.

ಈಗ 'ಗಾಂಧಿ ಜರ್ನಲಿಸಂ'ಗೆ ಬಂದಿರೋ ಸ್ಥಿತೀನೂ ಅದೇ.

ಇವತ್ತಿನ ಪತ್ರಿಕೋದ್ಯಮ ಗಾಂಧಿ ಎಂಬ ಗುರುವಿಗೇ ತಿರುಮಂತ್ರ ಹೇಳುತ್ತಿದೆ.

ಗಾಂಧಿಯ ನೆನಪಿನ ಓಣಿಯಲ್ಲಿ ನಡೆಯುತ್ತಾ ಇರುವಾಗ ಏಕೋ ಗೋವಿಂದ ಪೈ ಬರೆದ 'ಇನ್ನಿನಿಸು ದಿನ ಮಹಾತ್ಮ ನೀ ಬದುಕಬೇಕಿತ್ತು ' ಸಾಲುಗಳು ನೆನಪಿಗೆ ಬಂತು.

ಹೌದು, ನೀ ಇನ್ನಿನಿಸು ದಿನ ಬದುಕಬೇಕಿತ್ತು

–ಜಿ. ಎನ್. ಮೋಹನ್






## ಎಲೆ ಮರೆಯ ಗಾಂಧಿವಾದಿ :

# ಕರಿಯಪ್ಪ ಎರೇಸೀಮಿ

ಮಹಾತ್ಮ ಗಾಂಧೀಜಿ ಈ ಹೆಸರು ಕೋಟ್ಯಾಂತರ ಜನರಿಗೆ ಸ್ಫೂರ್ತಿ. ಭಾರತದ ಸ್ವಾತಂತ್ರ್ಯಕ್ಕಿಂತ ಮುಂಚೆಯೂ ಮತ್ತು ನಂತರದ ಕಾಲಘಟ್ಟದಲ್ಲೂ ಜನರಲ್ಲಿ ಹೋರಾಟದ ಕಿಚ್ಚನ್ನು ಹಚ್ಚಿದ ಹೆಸರು. ಮಹಾತ್ಮ ಗಾಂಧೀಜಿಯವರು ಭಾರತದ ಸ್ವಾತಂತ್ರ್ಯ ಶಿಲ್ಪಿ. ಇವರ ನಾಯಕತ್ವದಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟವು ಶಾಂತಿಯುತವಾಗಿ ನಡೆದು ಯಶಸ್ಸು ಸಾಧಿಸಿತು. ಗಾಂಧೀಜಿಯವರ ಸಮರ್ಥ ನಾಯಕತ್ವದ ಜೊತೆ ಜೊತೆಗೆ ಅವರಿಂದ ಪ್ರಭಾವಕ್ಕೊಳಗಾಗಿ ಹೋರಾಡಿದ ಕೋಟ್ಯಾಂತರ ಜನರ ತ್ಯಾಗದ ಫಲ ನಮ್ಮ ಸ್ವಾತಂತ್ರ್ಯ. ಇಂಥಹ ಕೋಟ್ಯಾಂತರ ಜನರಲ್ಲಿ ಮುನ್ನೆಲೆಗೆ ಬಂದು ಪ್ರಸಿದ್ಧಿಯಾದವರು ನೂರಾರು ಜನರಿರಬಹುದು. ಆದರೆ ಜನಮಾನಸದಲ್ಲಿ ಪ್ರಸಿದ್ಧಿ ಪಡೆಯದೇ ಎಲೆ ಮರೆ ಕಾಯಿಯಂತೆ ಹೋರಾಡಿ ಗಾಂಧಿ ಮಾರ್ಗದಲ್ಲಿ ಜೀವ ಸವೆಸಿದವರು ಬಹಳಷ್ಟು ಜನ. ಅಂಥವರಲ್ಲಿ ಒಬ್ಬರು ಶ್ರೀ ಕರಿಯಪ್ಪ ಎರೇಸೀಮಿ ಎಂಬ ಕೆಚ್ಚೆದೆಯ ಹೋರಾಟಗಾರ.

**ಜನನ, ಬಾಲ್ಯ ಮತ್ತು ಶಿಕ್ಷಣ**

ಹಾವೇರಿ ಜಿಲ್ಲೆಯಿಂದ ಹಾನಗಲ್ ಮಾರ್ಗದಲ್ಲಿ ವರದಾ ನದಿಯ ದಂಡೆಯ ಮೇಲಿರುವ ಪುಟ್ಟ ಗ್ರಾಮವೇ ಸಂಗೂರು. ಸಂಗೂರಿನ ಹಿಂದುಳಿದ ಕುರಿಗಾಹಿ ಜನಾಂಗದ ನೀಲಪ್ಪ ಮತ್ತು ಗಂಗವ್ವ ದಂಪತಿಗಳ ನಾಲ್ಕನೇ ಮಗನಾಗಿ ಕರಿಯಪ್ಪ 1–11–1910 ರಂದು ಜನಿಸಿದರು. ಹುಟ್ಟಿದ ಕೂಡಲೇ ತಾಯಿಯನ್ನು ಕಳೆದುಕೊಂಡ ಕರಿಯಪ್ಪ ತಂದೆ ಮತ್ತು ಮೂವರು ಅಣ್ಣಂದಿರ ಆಶ್ರಯದಲ್ಲಿ ಬೆಳೆದರು.

ಇವರ ಮನೆಗೆ ಭಿಕ್ಷೆಗೆಂದು ಬಂದ ಬಂಕಾಪುರದ ಕೆಂಡದ ಮಠದ ಶ್ರೀಗಳು ಇವರ ಚುರುಕುತನ ಗಮನಿಸಿ ಇವರನ್ನು ತಮ್ಮ ಮಠಕ್ಕೆ ಕರೆದುಕೊಂಡು ಹೋಗಿ ಅಲ್ಲಿರಿಸಿಕೊಂಡು ಶಿಕ್ಷಣಕ್ಕೆ ಅನುವು ಮಾಡಿಕೊಟ್ಟರು. ನಂತರದ ಶಿಕ್ಷಣವನ್ನು ಕರಿಯಪ್ಪನವರು ಮೋಟೆಬೆನ್ನೂರಿನಲ್ಲಿ ಮುಗಿಸಿದರು. ಅಲ್ಲಿ ಮುಲ್ಕಿ ಪರೀಕ್ಷೆಯನ್ನು ಉತ್ತಮ ಅಂಕಗಳೊಂದಿಗೆ ಪಾಸು ಮಾಡಿದರು.

**ಸ್ವಾತಂತ್ರ್ಯ ಹೋರಾಟ ಮತ್ತು ಗಾಂಧೀಜಿಯವರ ಸಂಪರ್ಕ**

ಇದೆ ವೇಳೆಯಲ್ಲಿ ಅವರಿಗೆ ಮೈಲಾರ ಮಹದೇವ ಅವರೊಂದಿಗೆ ಸ್ನೇಹ ಬೆಳೆಯಿತು. ಇಬ್ಬರೂ ಸೇರಿ ಗಾಂಧೀಜಿಯವರ 'ಹರಿಜನ', 'ಯಂಗ್ ಇಂಡಿಯಾ' ಪತ್ರಿಕೆ ಮತ್ತು ತಿಲಕರ 'ಕೇಸರಿ' ಪತ್ರಿಕೆಗಳನ್ನು ಓದುತ್ತಾ ಗಾಂಧೀಜಿಯವರಿಂದ ಗಾಢ ಪ್ರಭಾವಕ್ಕೊಳಗಾಗಿ ಸ್ವಾತಂತ್ರ್ಯ ಹೋರಾಟದೆಡೆಗೆ ಆಕರ್ಷಿತರಾದರು.

ಇವರ ಆಕರ್ಷಣೆಗೆ ನೀರೆರೆದು ಪೋಷಿಸಿದವರು ಇವರು ಓದುತ್ತಿದ್ದ ಹಂಸಭಾವಿಯ ದುರ್ಗದ ಬಸಪ್ಪ ಪ್ರೌಢಶಾಲೆಯ ಮುಖ್ಯ ಶಿಕ್ಷಕ ಟಿ.ಆರ್.ನೇಸ್ವಿ.

ಇದೇ ವೇಳೆಗೆ ಗಾಂಧೀಜಿಯವರು 1924 ರಲ್ಲಿ ಬೆಳಗಾವಿಯ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದರು. ಅವರನ್ನು ನೋಡುವ ಅದಮ್ಯ ಆಸೆಯೊಂದಿಗೆ ಕರಿಯಪ್ಪ ಮತ್ತು ಅವರ ಸಹಚರರು ಬೆಳಗಾವಿಗೆ ಹೋದರು. ಇದು ಅವರ ಜೀವನದಲ್ಲೇ ಅತೀ ದೊಡ್ಡ ತಿರುವು. ಅಹಿಂಸಾಮೂರ್ತಿ ಗಾಂಧೀಜಿಯವರ ದರ್ಶನದಿಂದ ಪುಲಕಿತರಾದ ಕರಿಯಪ್ಪನವರು ನಂತರ ತಮ್ಮ ಚಿತ್ತ ಹರಿಸಿದ್ದು ಸಬರಮತಿ ಆಶ್ರಮದ ಕಡೆಗೆ. ಕೇವಲ 14 ವರ್ಷ ವಯಸ್ಸಿನಲ್ಲಿ ಸಬರಮತಿ ಆಶ್ರಮ ಸೇರಿದ ಇವರು ಗಾಂಧೀಜಿಯರಿಗೆ 'ಬಾಪೂಜಿ ನಾನು ಕರಿಯಪ್ಪ ಎರೇಸೀಮಿ. ಹಾವೇರಿಯ ಸಂಗೂರಿನಿಂದ ಬಂದಿದ್ದೇನೆ. ನಿಮ್ಮ ನಾಯಕತ್ವಕ್ಕೆ ಮನಸೋತು ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ಧನಾಗಿ ಬಂದಿದ್ದೇನೆ' ಎಂದರು. ಇದಕ್ಕೆ ಗಾಂಧೀಜಿ 'ನಿನ್ನ ನಿರ್ಧಾರ ಮೆಚ್ಚುವಂಥದ್ದು. ನಿನ್ನ ಊರಿನ ಸುತ್ತಲುಇ ಅಹಿಂಸಾ ಮಾರ್ಗದಲ್ಲಿ ಹೋರಾಡು. ನಿನ್ನ ಅವಶ್ಯಕತೆ ಇದ್ದಾಗ ನಿನ್ನನ್ನು ಕರೆಸಿಕೊಳ್ಳುವೆ' ಎಂದು ಅಪ್ಪಣೆ ಕೊಟ್ಟರು. ಗಾಂಧೀಜಿಯವರ ಸಂಪರ್ಕಕ್ಕೆ ಬಂದು ಒಬ್ಬ ನುರಿತ ಸತ್ಯಾಗ್ರಹಿಯಾಗಿ ಪಳಗಿದ ಕರಿಯಪ್ಪನವರು ಹಾವೇರಿಯ ಕಡೆಗೆ ಪ್ರಯಾಣ ಬೆಳೆಸಿದರು.

ಗಾಂಧೀಜಿಯವರ ಅಣತಿಯಂತೆ ತಮ್ಮ ಭಾಗದ ರೈತಾಪಿ ಜನರನ್ನು ಅಹಿಂಸಾ ಮಾರ್ಗದಲ್ಲಿ ಬ್ರಿಟಿಷರ ವಿರುದ್ಧ ಸಂಘಟಿಸಲು ಆರಂಭಿಸಿದರು. ದಿನೇ ದಿನೇ ಬ್ರಿಟಿಷರ ವಿರುದ್ಧ ಜನರು ಒಗ್ಗೂಡತುಡಗಿದರು.ಜನರ ಆಕ್ರೋಶ ಹೆಚ್ಚಾಗತೊಡಗಿತು. ಇದರ ಹಿಂದಿನ

ಚಾಲಕ ಶಕ್ತಿ ಕರಿಯಪ್ಪ ಎಂದು ಅರಿತ ಬ್ರಿಟಿಷರು ಅವರನ್ನು ಬಂಧಿಸಿ ಮಹಾರಾಷ್ಟ್ರದ ವೀಸಾಪುರ್ ಜೈಲಿಗೆ ಹಾಕಿದರು. ಅಲ್ಲಿ 30 ತಿಂಗಳು ಜೈಲು ಶಿಕ್ಷೆಯನ್ನು ಅನುಭವಿಸಿದರು.

ಜೈಲಿನಿಂದ ಬಿಡುಗಡೆಯ ನಂತರ ಗಾಂಧೀಯವರ ಸಂದೇಶವೊಂದು ಕರಿಯಪ್ಪನವರಿಗೆ ಬಂದಿತು. ಅದರ ಪ್ರಕಾರ ರಾಣೆಬೆನ್ನೂರಿನ ಹರಿಜನಕೇರಿ ಮತ್ತು ಹಿರೇಕೆರೂರಿನ ಕಚವಿ ಗ್ರಾಮದಲ್ಲಿ ಧರ್ಮಶಾಲೆಯನ್ನು ಆರಂಭಿಸಿದರು.

ಮೆಣಸಿನಹಾಳ ತಿಮ್ಮನಗೌಡ ಎಂಬ ಇನ್ನೊರ್ವ ಕೆಚ್ಚೆದೆಯ ಹೋರಾಟಗಾರರ ಜೊತೆ ಸೇರಿ ಬ್ಯಾಡಗಿಯ ರೇಲ್ವೆ ಸ್ಟೇಷನ್ನಿಗೆ ಬೆಂಕಿ ಹಚ್ಚಿ ಸುಟ್ಟರು. ಬ್ರಿಟಿಷ್ ಸರ್ಕಾರದ ಕಚೇರಿಗಳನ್ನು ಧ್ವಂಸಗೊಳಿಸಲು ರಾಣೆಬೆನ್ನೂರ ತಾಲೂಕು ಸುಣಕಲ್ಲಬಿದರಿಯಲ್ಲಿ ನಾಡಬಾಂಬ್ ತಯಾರಿಸುವ ವೇಳೆಯಲ್ಲಿ ಬಾಂಬ್ ಸಿಡಿದು ಬಲಗೈಯನ್ನೇ ಕಳೆದುಕೊಂಡಿದ್ದರು. ಆದರೂ ಸ್ವಾತಂತ್ರ್ಯ ಕಿಚ್ಚು ಅವರಿಂದ ಹೋಗಿರಲಿಲ್ಲ. ಇವರ ಹೋರಾಟದ ಕಥನ ಕೇಳುತ್ತ ಹೋದರೆ ಮೇ ರೋಮಾಂಚನಗೊಳ್ಳುತ್ತದೆ.

ನಂತರ ಮಾಸೂರು ಚಾವಡಿ ಸುಟ್ಟಿದ್ದು, ಅರಣ್ಯ ಅಧಿಕಾರಿಯ ಹಣ ಕೆಣಟಿಜಜಜಿಟಿಜಜಳ್ಳೆ ಹೊಡೆದಿದ್ದು, ಸರ್ಕಾರಿ ದಾಖಲೆಗಳ ನಾಶ, ಅಂಚೆ ತಂತಿ ಕತ್ತರಿಸಿದ್ದು ಹೀಗೆ ಹತ್ತಾರು ಬಗೆಯಲ್ಲಿ ಬ್ರಿಟಿಷರಿಗೆ ಸಿಂಹಸ್ವಪ್ನರಾಗಿದ್ದರು. ಸ್ವಾತಂತ್ರ್ಯ ಹೋರಾಟಗಾರ ಸಂಗೂರ ಕರಿಯಪ್ಪ ಅವರನ್ನು ಹುಡುಕಿಕೆಣಟಿಜಜಜಿಟಿಜಜಟ್ಟರೆ 500ರೂ. ಬಹುಮಾನ ನೀಡುವುದಾಗಿ ಬ್ರಿಟಿಷ್ ಸರ್ಕಾರ ಘೋಷಿಸಿ, ಜಿಲ್ಲೆಯ ವಿವಿಧೆಡೆ ಈ ಕುರಿತು ಭಿತ್ತಿಪತ್ರಗಳನ್ನು ಅಂಟಿಸುವ ವ್ಯವಸ್ಥೆ ಮಾಡಿತ್ತು. ಇದಕ್ಕೆ ಜಗ್ಗದ ಸಂಗೂರ ಕರಿಯಪ್ಪ ಅಜ್ಞಾತ ಸ್ಥಳದಲ್ಲಿದ್ದುಂಡೇ ಹೋರಾಟ ಮಾಡಿ ಬ್ರಿಟಿಷರ ಪಾಲಿಗೆ ಸಿಂಹಸ್ವಪ್ನವಾಗಿದ್ದರು.

1942 ರ ಚಲೇಜಾವ್ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಇವರನ್ನು ಹಿಡಿಯುವುದು ಬ್ರಿಟಿಷರಿಗೆ ಬಹು ತ್ರಾಸದಾಯಕ ಕೆಲಸವಾಯಿತು. ಹೀಗಿರುವಾಗ 1943 ರಲ್ಲಿ ಸುಣಕಲ್ ಬಿದರಿ ಗ್ರಾಮದ ಜೋಳದ ಹೊಲದಲ್ಲಿ ನಾಡ ಬಾಂಬ್ ತಯಾರಿಕೆಯಲ್ಲಿ ತೊಡಗಿದಾಗ ಪೋಲಿಸರು ಇವರ ಮೇಲೆ ದಾಳಿ ಮಾಡಿದರು. ಅವರಿಂದ ತಪ್ಪಿಸಿಕೊಳ್ಳುವ ಆತುರದಲ್ಲಿ ಬಾಂಬ್ ಸ್ಫೋಟಗೊಂದು ಬಲಗೈ ಮುಂಗೈಯನ್ನು ಕಳೆದುಕೊಂಡರು. ಗಾಯಾಳು ಸ್ಥಿತಿಯಲ್ಲಿಯೇ ಬಂಧನಕ್ಕೊಳಗಾಗಿ ಎರಡು ಜೈಲು ವಾಸ ಅನುಭವಿಸಿದರು.

**ದಾಂಪತ್ಯ ಜೀವನ**

1934ರಲ್ಲಿ ಶಿರಸಿಗೆ ಬಂದಿದ್ದ ಗಾಂಧೀಜಿಗೆ ದಲಿತ ಬಾಲಕಿ 'ಹೀರಾ' (ವೀರಮ್ಮ) ಹಾರ ಹಾಕಿ ಸ್ವಾಗತಿಸಿದ್ದಳು. ಅಲ್ಲಿನ ಜೋಗಳೇಕರ್ ಕುಟುಂಬದ ಈ ಬಾಲಕಿಯನ್ನು ಕಂಡ ಗಾಂಧೀಜಿ, 'ಈಕೆಯನ್ನು ನಾನು ಸಾಕುತ್ತೇನೆ' ಎಂದು ಕೇಳಿ ಸಬರಮತಿ ಆಶ್ರಮಕ್ಕೆ ಕರೆದೊಯ್ದಿದ್ದರು. ಶಿರಸಿಯಲ್ಲಿ



ಕೋಣವನ್ನು ಬಲಿ ಕೊಡುವುದನ್ನು ಗಾಂಧೀಜಿಯವರು ವಿರೋಧಿಸಿದ್ದರು.

ಆಕೆಗೆ 'ವೀರಮ್ಮ' ಎಂದು ಹೆಸರಿಟ್ಟರು. ಆ ಬಾಲಕಿ ಗಾಂಧೀಜಿ ಹಾಗೂ ಕಸ್ತೂರಬಾ ಆಶ್ರಯದಲ್ಲಿ ಸಾಬರಮತಿ ಆಶ್ರಮದಲ್ಲಿ ಬೆಳೆದಳು. ಬಾಲಕಿಗೆ, ಮಾಜಿ ಪ್ರಧಾನಿ ಜವಾಹರಲಾಲ್ ನೆಹರೂ ಜೊತೆ ಆಶ್ರಮಕ್ಕೆ ಬರುತ್ತಿದ್ದ ಇಂದಿರಾ (ಮಾಜಿ ಪ್ರಧಾನಿ) ಜೊತೆ ಒಡನಾಟವಿತ್ತು.

ಸಾಬರಮತಿಯಲ್ಲಿ ಬಾಲ್ಯ ಕಳೆದ ಕಾರಣ, ವೀರಮ್ಮಗೆ 'ಗುಜರಾತಿ' ಭಾಷೆಯೇ ರೂಢಿಯಾಯಿತು. ಆಗ ಸ್ವಾತಂತ್ರ್ಯ ಹೋರಾಟಗಳಲ್ಲಿ ಸಕ್ರಿಯ ರಾಗಿದ್ದ ಹಾವೇರಿಯ ಸಂಗೂರಿನ ಕರಿಯಪ್ಪ ಯರೇಸೀಮಿ ಗಾಂಧೀಜಿ ಆಶ್ರಮಕ್ಕೆ ಬರುತ್ತಿದ್ದರು. ಅವರಿಗೆ ವೀರಮ್ಮ ಪರಿಚಯವಾಗಿದ್ದರು. ಗಾಂಧೀಜಿಯವರ ಆದೇಶದಂತೆ 1940 ರಲ್ಲಿ ಹುಬ್ಬಳ್ಳಿಯಲ್ಲಿದ್ದ ಸರದಾರ ವೀರನಗೌಡ ಪಾಟೀಲ ಅವರಿಂದ ಸ್ಥಾಪಿತವಾದ ಹರಿಜನ ಬಾಲಿಕಾ ಆಶ್ರಮದಲ್ಲಿ (ಈಗಿನ ಮಹಿಳಾ ವಿದ್ಯಾ ಪೀಠ) ಗಾಂಧೀಜಿಯವರ ಸಾಕು ಮಗಳಾದ ವೀರಮ್ಮ ಅವರೊಂದಿಗೆ ಕರಿಯಪ್ಪನವರ ಮದುವೆ ಸರಳವಾಗಿ ನೆರವೇರಿತು.

ಕರಿಯಪ್ಪನವರೊಂದಿಗೆ ಅವರ ಪತ್ನಿ ವೀರಮ್ಮ ಕೂಡ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದರು. ಸ್ವಾತಂತ್ರ್ಯ ಸಿಗುವವರೆಗೆ ಮಕ್ಕಳು ಬೇಡವೆಂದು ನಿರ್ಧರಿಸಿ ಅದೇ ರೀತಿ ನಡೆದುಕೊಂಡರು. ಸ್ವಾತಂತ್ರ್ಯ ನಂತರವೇ ಮೊದಲ ಮಗ ಚಿದಾನಂದನನ್ನು ಪಡೆದರು.

**ಸ್ವಾತಂತ್ರ್ಯಾನಂತರದ ಜೀವನ**

ಸ್ವಾತಂತ್ರ್ಯದ ನಂತರ ಗಾಂಧೀಜಿಯವರ ಚಿತಾಭಸ್ಮವನ್ನು ತಂದು ಸಂಗೂರಿನಲ್ಲಿ ಸ್ಥಾಪಿಸಿದರು. ಗಾಂಧೀಜಿ ಸ್ವರಾಜ್ ಆಶ್ರಮವನ್ನು ಸ್ಥಾಪಿನ ಸಮಾಜದ ಹಿತಕ್ಕಾಗಿ ಉಳಿದ ಜೀವನ ಸವೆಸಿದರು. ಭೂದಾನ ಚಳುವಳಿ ನಡೆಸಿ ವಿನೋಬಾ ಭಾವೆ ಅವರನ್ನು ಸಂಗೂರಿಗೆ ಕರೆಯಿಸಿದರು. ತಮ್ಮ ನಾಲ್ಕು ಎಕರೆ ಹೊಲದಲ್ಲಿ ಒಂದು ಎಕರೆ ದಾನ ನೀಡಿ ಮಾದರಿ ಎನಿಸಿಕೊಂಡರು. ಕೊನೆಯವರೆಗೂ ಕರಿಯಪ್ಪ ಊರು, ಹೋರಾಟ, ಸಮಾಜ ಸೇವೆಗಳನ್ನು ಬಿಡಲಿಲ್ಲ. 'ಖಾದಿ ತೊಡಿ, ಓದಿ, ಸ್ವಚ್ಛತೆ ಕಾಪಾಡಿ, ಶುದ್ಧ ತರಕಾರಿ, ಹಣ್ಣು, ಸೊಪ್ಪುಗಳನ್ನೇ ಸೇವಿಸಿ' ಎಂದು ಸಲಹೆ ನೀಡುತ್ತಿದ್ದರು. ಆ ಊರಿನ ಹಿರಿಯರು, ಅಧಿಕಾರಿಗಳು ಬಂದು ಅವರನ್ನು ಗೌರವಿಸುತ್ತಿದ್ದರು. ಆದರೆ ಅವರು ಮಾತ್ರ ಸ್ವಾವಲಂಬಿತನ ಹಾಗೂ ಸರಳತೆಯನ್ನು ಬಿಡಲೇ ಇಲ್ಲ. ಊರು ಸ್ವಚ್ಛತೆ ಮಾಡಲು ಮಕ್ಕಳನ್ನು ಕಳುಹಿಸುತ್ತಿದ್ದರು. ಗ್ರಾಮೀಣ ಭಾಗದಲ್ಲಿನ ಹೈನುಗಾರಿಕೆ, ಸಹಕಾರಿ ಕ್ಷೇತ್ರ, ಒಕ್ಕಲುತನ, ಗುಡಿ ಕೈಗಾರಿಕೆಗಳಿಗೆ ಪ್ರೋತ್ಸಾಹಿಸುತ್ತಿದ್ದರು.

ಇಂಥಹ ಕೆಚ್ಚೆದೆಯ ಹೃದಯ ಜುಲೈ 21, 1981 ರಂದು ತನ್ನ ಬಡಿತ ನಿಲ್ಲಿಸಿತು. ಹುಬ್ಬಳ್ಳಿಯ ಕಿಮ್ಸ್ನಲ್ಲಿ ಕರಿಯಪ್ಪನವರು ತಮ್ಮ ಕೊನೆಯುಸಿರೆಳೆದರು.

'ಅಪ್ಪ ಇಷ್ಟೆಲ್ಲಾ ಬಾಸುಂಡೆ ಬರುವ ಹಾಗೆ ಬ್ರಿಟಿಷರು ಹೊಡೆದಾಗ, ಬಾಂಬ್ ಸಿಡಿದು ಕೈ ತುಂಡಾದಾಗ ದುಃಖ, ನೋವು ಆಗಲಿಲ್ಲವಾ. ಇದೆಲ್ಲಾ ಯಾಕಪ್ಪಾ? ಎಂದು ಮಗಳು ಕೇಳಿದಾಗ 'ಮಗಳೇ ನೋವು ನಮ್ಮಲ್ಲೇ ಉಳಿದಿದೆ. ಎಲ್ಲರಿಗೂ ಸ್ವಾತಂತ್ರ್ಯ ಬಂದಿದೆಯಲ್ಲಾ? ಎಂದು ಕಿರು ನಗೆ ಬೀರಿದ ನಿಸ್ವಾರ್ಥಿ ಕರಿಯಪ್ಪ ಎರೇಸೀಮಿಯವರಿಗೆ ಧನ್ಯತೆ ಕುಸುಮಗಳನ್ನು ಅರ್ಪಿಸುತ್ತಾ.....

**– ರವಿಚಂದ್ರ ಜಗಣ್ಣವರ್**




## ಗಾಂಧಿ ವಿಚಾರ ವೇದಿಕೆಯಲ್ಲಿ

# ಸುಧೀಂದ್ರ ಕುಲಕರ್ಣಿ ಮಾತುಗಳು...

**ಹಿಂ**ದೂ ವಿರೋಧಿಯಲ್ಲದ ಜಾತ್ಯತೀತತೆ, ಮುಸ್ಲಿಂ ವಿರೋಧಿಯಲ್ಲದ ಹಿಂದುತ್ವ ಎಂದು ಸೂತ್ರ ರೂಪದಲ್ಲಿ ಅರವಿಂದ ಚೊಕ್ಕಾಡಿಯವರು ಹೇಳಿದ **'ಗಾಂಧಿ ವಿಚಾರ ವೇದಿಕೆ'** ಯ ಧ್ಯೇಯ ವರ್ತಮಾನದ ಅಗತ್ಯವಾಗಿದೆ.

ಗಾಂಧಿ ವಿಚಾರ ವೇದಿಕೆ ಮಂಗಳೂರಿನ ವ್ಯಾಸ ಪೀಠ ಇರಬಹುದೆಂದು ನಾನು ಅಂದುಕೊಂಡಿದ್ದೆ. ಆದರೆ ಗುಲ್ಬರ್ಗ, ಬೆಂಗಳೂರು, ಕೊಪ್ಪಳ, ತೀರ್ಥಹಳ್ಳಿ, ವಿಜಾಪುರದಿಂದೆಲ್ಲ ಬಂದವರನ್ನು ನೋಡಿದಾಗ ಇದು ಇಡೀ ರಾಜ್ಯದ ವೇದಿಕೆ ಎಂದು ಗೊತ್ತಾಯಿತು. ಅಥಣಿಯಲ್ಲಿ ಇದರ ಒಂದು ಘಟಕವನ್ನು ಮಾಡಲು ನಾನು ಬದ್ಧನಿದ್ದೇನೆ.

ಗಾಂಧಿ ವಿಚಾರ ವೇದಿಕೆಯ ಅಧ್ಯಕ್ಷ ಶ್ರೀಧರ ಭಿಡೆಯವರು ಅವರ ಗಾಂಧಿವಾದಿ ಅಜ್ಜನ ಬಗ್ಗೆ ಬರೆಯುತ್ತಾ ಹೇಳಿದ ಮಾತುಗಳು ಎಂಥ ಉದಾತ್ತ ಚಿಂತನೆ ಉಳ್ಳವರು ನಾರಾಯಣ ಭಿಡೆಯವರಾಗಿದ್ದರು ಎಂದು ಸೂಚಿಸುತ್ತದೆ.

ಗಾಂಧೀಜಿಯವರ ಮೇಲಿನ ಅಪಪ್ರಚಾರಕ್ಕೆ ಉತ್ತರಿಸುವುದು ಅವಶ್ಯವಿದೆ. ಈ ನಿಟ್ಟಿನಲ್ಲಿ ಎಂ. ಜಿ. ಹೆಗಡೆಯವರು ಬರೆದಿರುವ, **'ಮಿನುಗು ನೋಟ'** ಇಂದಿನ ದಿನಮಾನಕ್ಕೆ ಅಗತ್ಯವಾದ ಕೃತಿಯಾಗಿದೆ.

ಮಹಾತ್ಮಾ ಗಾಂಧಿಯವರು ಮಹಾ ನಾಯಕ. ಆದರೆ ಅವರೂ ವಿಮರ್ಶೆಗೆ ಅರ್ಹರೇ. ಆದರೆ ವಿಮರ್ಶೆ ಎಂದರೆ ಅಪಪ್ರಚಾರವಲ್ಲ. ಆರ್.ಎಸ್. ಎಸ್. ನ ಪ್ರಮುಖರಾದ ಮೋಹನ್ ಭಾಗವತ್ ಅವರು ಗಾಂಧೀಜಿಯನ್ನು ಹೊಗಳುತ್ತಾರೆ. ಆದರೆ ಆರೆಸ್ಸೆಸ್ ನ ಸ್ವಯಂಸೇವಕರು ಗಾಂಧೀಜಿಯನ್ನು ನಿಂದಿಸುತ್ತಾರೆ. ಆಗ ನೀವು ನಿಮ್ಮ ಸ್ವಯಂ ಸೇವಕರಿಗೆ ಗಾಂಧೀಜಿಯ ಮೇಲೆ ಅಪಪ್ರಚಾರ ಮಾಡಬಾರದು ಎಂದು ಹೇಳಬೇಕು. ಅಥವಾ ನಿಮ್ಮ ನಿಜವಾದ ನಿಲುವು ಏನು ಎಂದು ಹೇಳಬೇಕು.

ಹಾಗೆ ನೋಡಿದರೆ ಗಾಂಧೀಜಿಯ ಮೇಲೆ ಮೊದಲು ಅಪಪ್ರಚಾರ ಪ್ರಾರಂಭಿಸಿದ್ದು ಕಮ್ಯುನಿಸ್ಟರು. ಕೆಲವೊಮ್ಮೆ ಅಂಬೇಡ್ಕರ್‌ವಾದಿಗಳೂ ಗಾಂಧೀಜಿಯ ಮೇಲೆ ಅಪಪ್ರಚಾರ ನಡೆಸಿದ್ದಾರೆ.

ಇತ್ತೀಚೆಗೆ ಆಫ್ರಿಕಾದಲ್ಲಿ ಗಾಂಧೀಜಿ ಕರಿಯರ ವಿರುದ್ಧ ಇದ್ದರು ಎಂದು ಅಪಪ್ರಚಾರ ನಡೆದಿತ್ತು. ದಕ್ಷಿಣ ಆಫ್ರಿಕಾದಲ್ಲಿ ಗಾಂಧೀಜಿ ಕರಿಯರ ಅಭ್ಯುದಯಕ್ಕಾಗಿ ಎಷ್ಟು ಕೆಲಸ ಮಾಡಿದ್ದಾರೆ, ಇಲ್ಲಿ ದಲಿತ ಅಭಿವೃದ್ಧಿಗಾಗಿ ಎಷ್ಟು ಕೆಲಸ ಮಾಡಿದ್ದಾರೆ ಎಂದು ಗೊತ್ತಿಲ್ಲದವರು ಆಡುವ ಮಾತುಗಳಿವೆ.

ಗಾಂಧೀಜಿಯನ್ನು ಹಿಂದೂ ವಿರೋಧಿ ಎನ್ನುವುದು ಮತ್ತೊಂದು ಅಪಪ್ರಚಾರ. ಜೀವನದುದ್ದಕ್ಕೂ ರಾಮನಾಮವನ್ನು ಜಪಿಸಿದ ಗಾಂಧೀಜಿ ಒಬ್ಬ ಶ್ರೇಷ್ಠ ಹಿಂದೂ ಆಗಿದ್ದರು. ಅವರು ನಮ್ಮ ಋಗ್ವೇದ ಹೇಳುವ, "**ಅನೌ ಭದ್ರಾ ಕೃತವೋ ಯಂತು ವಿಶ್ವತಃ**" ಎನ್ನುವ ಮಾತನ್ನು ಅಳವಡಿಸಿಕೊಂಡಿದ್ದರು. ಕೊನೆಯ ಉಸಿರಿನಲ್ಲೂ ಹೇ ರಾಮ್ ಎಂದು ಉದ್ಗರಿಸಿದ ,ಭಗವದ್ಗೀತೆಯನ್ನು ತನ್ನ ತಾಯಿ ಎಂದು ಹೇಳಿದ ಗಾಂಧಿಯನ್ನು ಹಿಂದೂ ವಿರೋಧಿ ಎನ್ನಲು ಸಾಧ್ಯವೇ ?

ಗಾಂಧೀಜಿಯವರ ಸತ್ಯಾಗ್ರಹದ ಪರಿಕಲ್ಪನೆಯ ಹಿಂದೆ ಇಸ್ಲಾಮಿನ ಪ್ರೇರಣೆಯೂ ಇದೆ. ಹೀಗೆ ಗಾಂಧೀಜಿ

ಎಲ್ಲ ಧರ್ಮಗಳ ಅತ್ಯುತ್ತಮ ಅಂಶಗಳನ್ನು ತಮ್ಮ ಜೀವನ ಮತ್ತು ವಿಚಾರ ಧಾರೆಗಳಲ್ಲಿ ಅಳವಡಿಸಿ ಕೊಂಡಿದ್ದರು .

ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ನಾಯಕರುಗಳಿದ್ದರು. ಸಾವರ್ಕರ್ ಅವರೂ ಸ್ವಾತಂತ್ರ್ಯ ಹೋರಾಟ ಮಾಡಿ ಕಠಿಣ ಶಿಕ್ಷೆಯನ್ನು ಅನುಭವಿಸಿದ್ದರು. ಆದರೆ ಇವತ್ತು ನಮ್ಮ ನಾಯಕನಿಗೆ ಏನೂ ಹೇಳಬಾರದು. ಗಾಂಧೀಜಿಯನ್ನು ಹೇಗೆ ಬೇಕಾದರೂ ನಿಂದಿಸಬಹುದು ಎಂದಾಗಿದೆ. ಇದನ್ನು ಪ್ರಶ್ನಿಸಬೇಕು. ಆದರೆ ಪ್ರಶ್ನಿಸುವುದು ಮಾತ್ರ ಗಾಂಧಿ ವಿಚಾರ ವೇದಿಕೆಯ ಕೆಲಸವಾಗಬಾರದು. ರಚನಾತ್ಮಕ ಕಾರ್ಯಗಳಿಗೆ ತೊಡಗಬೇಕು. ಆರ್.ಎಸ್.ಎಸ್. ನವರೊಂದಿಗೂ ಗಾಂಧಿ ವಿಚಾರ ವೇದಿಕೆ ಸಂವಾದ ನಡೆಸಬೇಕು. ರಚನಾತ್ಮಕ ಕಾರ್ಯಗಳಿಗೆ ಗಾಂಧೀಜಿಯೇ ಮುಖ್ಯರಾಗಿದ್ದಾರೆ.

ಮಹಿಳೆಯರ ಸ್ವಾತಂತ್ರ್ಯ ಮತ್ತು ಸಬಲೀಕರಣವೂ ಗಾಂಧಿಯವರ ವಿಚಾರಧಾರೆಯಲ್ಲಿದೆ. ಪರಿಸರ ಸಂರಕ್ಷಣೆಯ ವಿಷಯದಲ್ಲಿ ಗಾಂಧಿ ಹೇಳಿದ **'ಪ್ರಕೃತಿ ಮನುಷ್ಯರ ಅಗತ್ಯಗಳನ್ನು ಪೂರೈಸ ಬಲ್ಲದೆ ಹೊರತು ಅವರ ದುರಾಶೆಗಳನ್ನು ಈಡೇರಿಸಲಾಗದು'** ಎನ್ನುವ ಮಾತುಗಳು ಸದಾ ಕಾಲಕ್ಕೂ ಸಲ್ಲುತ್ತವೆ. ಇದಕ್ಕಿಂತ ಉದಾತ್ತ ಕಲ್ಪನೆಗಳನ್ನು ಯಾವ ಪರಿಸರ ತಜ್ಞರೂ ಹೇಳಲು ಸಾಧ್ಯವಿಲ್ಲ.

ಹತ್ತೊಂಬತ್ತನೇ ಶತಮಾನ ಅಂಗ್ಲರದ್ದು, 20ನೇ ಶತಮಾನ ಅಮೇರಿಕಾ ಪ್ರಭುತ್ವದ್ದು. ಆದರೆ ಅಮೇರಿಕಾ ಮತ್ತು ಯುರೋಪ್ ನ ಪ್ರಭುತ್ವ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿದೆ. 21 ನೇ ಶತಮಾನದಲ್ಲಿ ಯಾರೂ ಮೇಲುಗೈ ಪ್ರಭುತ್ವ ಸಾಧಿಸುವ ಅಗತ್ಯವಿಲ್ಲ. ಜಗತ್ತನ್ನು ಸರಿಯಾದ ದಿಕ್ಕಿನಲ್ಲಿ ನಡೆಸುವ ಶಕ್ತಿ ಸಾಮರ್ಥ್ಯ ಗಾಂಧಿ ವಿಚಾರ ಧಾರೆಗೆ ಇದೆ. ಇದರಿಂದ ಜಗತ್ತಿಗೆ ಹೊಸ ದಿಕ್ಕನ್ನು ನೀಡ ಬಹುದು.

ಗಾಂಧೀಜಿ ಕುರಿತು ಅಪಪ್ರಚಾರ ಮಾಡುವ ಜನರು ನೆಹರು ಅವರನ್ನು ಖಳನಾಯಕರನ್ನಾಗಿ ಮಾಡುತ್ತಿದ್ದಾರೆ. ಸ್ವಾತಂತ್ರ್ಯಕ್ಕೆ ಮೊದಲು ಹಾಗೂ ನಂತರ ನೆಹರೂ ಅವರು ದೇಶಕ್ಕಾಗಿ ಮಾಡಿದ ತ್ಯಾಗ, ಕೊಡುಗೆಗಳನ್ನು ಅಳಿಸಿ ಹಾಕಲಾಗುತ್ತಿದೆ. ನೆಹರು ಕೆಲವು ತಪ್ಪುಗಳನ್ನು ಮಾಡಿರಬಹುದು. ಆದರೆ ದೇಶಕ್ಕೆ ಅವರು ನೀಡಿದ ಕೊಡುಗೆಗಳನ್ನು ಅಲ್ಲಗಳೆಯಲಾಗದು. ಅವರ ಕೊಡುಗೆ ಮರೆತರೆ ನಾವು ಕೃತಜ್ಞ ರಾಗುತ್ತೇವೆ. ನೆಹರೂ ವಿರುದ್ಧದ ಅಪಪ್ರಚಾರಕ್ಕೂ ನಾವು ಉತ್ತರ ಕೊಡ ಬೇಕಿದೆ.

**ದೇಶ ವಿಭಜನೆಗೆ ಗಾಂಧಿ ಹೊಣೆಯಲ್ಲ :**

ಭಾರತದ ವಿಭಜನೆಗೆ ಗಾಂಧಿ ಹೊಣೆ ಎಂದು ಅಪಪ್ರಚಾರ ಮಾಡಲಾಗುತ್ತಿದೆ. ಹಿಂದೂ ರಾಷ್ಟ್ರ ಆಗ ಬೇಕು ಎಂಬುದನ್ನು ಅವಿಭಜಿತ ಭಾರತದ ಸಂದರ್ಭದಿಂದಲೂ ಹೇಳಲಾಗುತ್ತಿದೆ. ಆಗ ಅಖಂಡ ಭಾರತದಲ್ಲಿ ಮುಸ್ಲಿಂರ ಪ್ರಮಾಣ ಶೇಕಡಾ 30 ರಷ್ಟು ಇತ್ತು. ಆಗ ಇದನ್ನು ಹಿಂದೂ ರಾಷ್ಟ್ರ ಮಾಡಲು ಸಾಧ್ಯವಿತ್ತೇ ? ಈ ಬಗ್ಗೆ ಮಾತಾಡುವವರು ಆಗ ಏನು ಮಾಡಿದರು ?

ಭಾರತ ವಿಭಜನೆಗೆ ಬ್ರಿಟಿಷರು ಹಾಗೂ ಮುಸ್ಲಿಂ ಲೀಗ್ ಪ್ರತಿಪಾದಿಸಿದ. ದ್ವಿರಾಷ್ಟ್ರ ನೀತಿ ಕಾರಣ. ಹಿಂಸಾಚಾರ ತಡೆಯುವ ಕಾರಣಕ್ಕಾಗಿ ಗಾಂಧೀಜಿ ದೇಶ ವಿಭಜನೆಗೆ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿದರು. ಮುಸ್ಲಿಂ ಲೀಗ್ ನ ದ್ವಿರಾಷ್ಟ್ರ ನೀತಿಯನ್ನು ಸಾವರ್ಕರ್ ಕೂಡಾ ಪ್ರತಿಪಾದಿಸಿದ್ದರು. ಆದರೆ ಈಗ ಅವರನ್ನು ದೊಡ್ಡ ದೇಶ ಭಕ್ತ ಎಂದು ಬಿಂಬಿಸಲಾಗುತ್ತಿದೆ.

ಸಮಾಜವನ್ನು ಒಡೆದು ಅಧಿಕಾರಕ್ಕೆ ಬರುವ ಹೊಲಸಿನ ರಾಜಕಾರಣಕ್ಕೆ ಭ್ರಷ್ಟಾಚಾರದ, ಹಿಂಸೆಯ, ಕೊಲೆಯ ರಾಜಕಾರಣಕ್ಕೆ ಗಾಂಧೀಜಿ ವಿಚಾರಧಾರೆಯ ಮೂಲಕ ಈಗ ಉತ್ತರ ಕೊಡ ಬೇಕಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆಯುತ್ತಿರುವ ರಾಜಕೀಯ ಕೊಲೆಗಳಿಗೆ ಹಿಂದೂ ಧರ್ಮದಲ್ಲಾಗಲಿ ಮುಸ್ಲಿಂ ಧರ್ಮದಲ್ಲಾಗಲಿ ಸ್ಥಾನವಿದೆಯೇ? ಇದನ್ನು ಸಂವಿಧಾನವಾದರೂ ಒಪ್ಪುತ್ತದೆಯೇ ? ಮಂಗಳೂರನ್ನು, ಕರ್ನಾಟಕವನ್ನು ಕೋಮುವಾದ ವೈರಾಣುವಿನಿಂದ ಹಾಗೂ ಕೋಮು ಹಿಂಸೆ ಮುಕ್ತಗೊಳಿಸುವ ಪ್ರತಿಜ್ಞೆಯನ್ನು ಎಲ್ಲರೂ ತೊಡಬೇಕಿದೆ. ಜಗತ್ತಿಗೆ ಭಾರತ, ಭಾರತಕ್ಕೆ ಕರ್ನಾಟಕ ಆದರ್ಶ ಆಗ ಬೇಕು. ಗಾಂಧೀಜಿ ಪ್ರತಿಪಾದಿಸಿದ ಸದ್ವಿಚಾರಗಳಿಂದ ಇದು ಖಂಡಿತಾ ಸಾಧ್ಯ.

ದಕ್ಷಿಣ ಕನ್ನಡದಲ್ಲಿ ಗಾಂಧಿ ವಿಚಾರ ವೇದಿಕೆ ಹೆಚ್ಚು ಕ್ರಿಯಾಶೀಲವಿರಬೇಕಾಗಿದೆ. ರಾಷ್ಟ್ರದ ಅಭಿವೃದ್ಧಿಗೆ ದಕ್ಷಿಣ ಕನ್ನಡ ಅಪಾರ ಕೊಡುಗೆ ಕೊಟ್ಟಿದೆ. ಇಲ್ಲಿಯೇ ಕೋಮುಗಲಭೆಗಳು ನಡೆಯುವುದು ಬೇಸರದ ಸಂಗತಿ. ಕೋಮುವಾದಕ್ಕೆ ಆಸ್ಪದ ಕೊಡಬೇಡಿ ಎಂದು ನಾನು ನನ್ನ ಹಿಂದೂ ಬಾಂಧವರಲ್ಲಿ ಮನವಿ ಮಾಡುತ್ತೇನೆ. ಅದೇ ರೀತಿ ಮುಸ್ಲಿಮರಲ್ಲೂ ಕೋಮುವಾದ ಇದೆ. ಮುಸ್ಲಿಮರೂ ತಮ್ಮಲ್ಲಿನ ಕೋಮುವಾದವನ್ನು ವಿರೋಧಿಸಬೇಕು ಎಂದು ಮುಸ್ಲಿಂ ಬಾಂಧವರಲ್ಲೂ ಮನವಿ ಮಾಡುತ್ತಿದ್ದೇನೆ. ■









# ನಾವು ಕಂಡೂ ಕಾಣದ ಗಾಂಧಿ

A great man is not born; but born out of situations ಎನ್ನುವುದು ಈ ಪುಸ್ತಕವನ್ನು ಓದಿದಾಗ ಅರ್ಥವಾಗುತ್ತದೆ. ಈ ಕೃತಿಯ ವ್ಯಾಪ್ತಿ ಗಾಂಧಿ ಆಫ್ರಿಕಾಕ್ಕೆ ಹೋಗುವಲ್ಲಿಂದ ಶುರುವಾಗಿ ಆಫ್ರಿಕಾದಿಂದ ಹಿಂದಿರುಗುವಲ್ಲಿಗೆ ಮುಗಿಯುತ್ತದೆ. ಅದರ ನಡುವೆ ನಡೆಯುವ ಒಂದೊಂದು ಘಟನೆಗಳೂ ಗಾಂಧಿಯನ್ನು ಹೇಗೆ ಒಂದು ಅನುಭವ ಶಿಲ್ಪವಾಗಿ ರೂಪಿಸಿತು ಎಂದು ಕೃತಿಯು ಹೇಳುತ್ತದೆ. ಆಫ್ರಿಕಾ ಖಂಡವನ್ನು ಪರಿಚಯಿಸುತ್ತಾ ಪ್ರಕಾಶ್ ಅವರು," ಆಫ್ರಿಕಾವು ಮನುಕುಲದ ತಾಯ್ನಾಡಲ್ಲವೆ" ಎಂದು ಕೇಳುತ್ತಾರೆ. ಎಲ್ಲ ಮನುಷ್ಯರ ಮೂಲ ನಿವಾಸ ಆಫ್ರಿಕಾ. ಗಾಂಧಿಯ ವ್ಯಕ್ತಿತ್ವದ ರೂಪಿಸುವಿಕೆಯೂ ಮೂಲ ನಿವಾಸದಲ್ಲೆ ಆಯಿತು.

ಅಂದಿನ ಆಫ್ರಿಕಾದ ಕಥನವು ವರ್ತಮಾನದ ಬಹು ಮುಖ್ಯ ಸಂಗತಿಯೊಂದನ್ನು ನಮ್ಮ ಮುಂದಿಡುತ್ತದೆ. ಬ್ರಿಟಿಷರಿಂದ ಭಾರತೀಯರಿಗೆ ದಕ್ಷಿಣ ಆಫ್ರಿಕಾದಲ್ಲಿ ಆದಷ್ಟು ಅವಮಾನಗಳು( ಅವಮಾನ; ದೌರ್ಜನ್ಯ ಅಲ್ಲ. ದೌರ್ಜನ್ಯ ಆಫ್ರಿಕಾಕ್ಕಿಂತ ಜಾಸ್ತಿಯೇ ಭಾರತದಲ್ಲಿ ಆಗಿದೆ) ಭಾರತದಲ್ಲಿ ಆಗಿಲ್ಲ. ಭಾರತೀಯರು ಯಾರೇ ಇದ್ದರೂ ಆಫ್ರಿಕಾದ ಬಿಳಿಯರ ಆಡಳಿತದ ಪ್ರಕಾರ ಅವರಿಗೆ,' ಕೂಲಿ' ಎಂದು ಹೆಸರು. ಎಲ್ಲದರಲ್ಲೂ ಅವರು ನಿಕೃಷ್ಟರು. ಅದರ ವಿರುದ್ಧ ಗಾಂಧಿ ಮಾತ್ರ ಅಲ್ಲ; ಆಫ್ರಿಕಾದಲ್ಲಿದ್ದ ಮುಸ್ಲಿಮರು, ವಿವಿಧ ಜಾತಿಗಳವರು ಎಲ್ಲ ಒಟ್ಟಾಗಿ ಸಿಡಿದೆದ್ದರು. ಆದರೆ ಮನುಷ್ಯರನ್ನು ಅಸ್ಪೃಶ್ಯರೆಂದು ಭಾರತದಲ್ಲೆ ಸಾವಿರಾರು ವರ್ಷ ನಿಕೃಷ್ಟ ಮಾಡಲಿಲ್ಲವೆ, ಈವತ್ತೂ ಮಾಡುತ್ತಿಲ್ಲವೆ? ಇಲ್ಲಿ ಯಾರು ದಲಿತರನ್ನು ಅಸ್ಪೃಶ್ಯರೆಂದು ನಿಕೃಷ್ಟವಾಗಿಸಿದರೋ ಅವರೆಲ್ಲ ಸೇರಿ ಆಫ್ರಿಕಾದಲ್ಲಿ ಬಿಳಿಯರ ವಿರುದ್ಧ ಹೋರಾಡುವುದು ಒಂದು ವಿಡಂಬನೆಯಲ್ಲವೆ. ಅವತ್ತು ನಾವ್ಯಾರೂ ಬದುಕಿರಲಿಲ್ಲ ಸರಿ. ನಾವದಕ್ಕೆ ಜವಾಬ್ದಾರರಲ್ಲ. ಆದರೆ ಇವತ್ತಿಗೂ ಅಸ್ಪೃಶ್ಯತೆಯ ಆಚರಣೆ ಇದೆಯಲ್ಲವೆ. ಅದರ ಬಗ್ಗೆ ಸಂವೇದನಾಶೀಲವಾಗಿ ಇವತ್ತಾದರೂ ಎಲ್ಲರೂ ಯೋಚಿಸಲು ಸಾಧ್ಯವಾಗುತ್ತಿದೆಯೆ? ದೇವಸ್ಥಾನದಲ್ಲಿ ಸಹ ಪಂಕ್ತಿ ಭೋಜನವೆ ಆಗಬೇಕು ಎಂದು ನಾನು ಹೇಳಿದ ತಕ್ಷಣ ನನ್ನನ್ನು ಆಕ್ಷೇಪಿಸಲು ನೂರು ಜನ ಇವತ್ತಿಗೂ ಬರುತ್ತಾರೆ! ಇದು ಸರಿ ಎಂದಾದರೆ, ಭಾರತೀಯರನ್ನು ಬ್ರಿಟಿಷರು ನಿಕೃಷ್ಟವಾಗಿ ಕಂಡದ್ದು ಹೇಗೆ ತಪ್ಪಾಗುತ್ತದೆ? ಮೇಲಿನವನು ಕೆಳಗಿನವನನ್ನು ನಿಕೃಷ್ಟವಾಗಿ ಕಾಣುವ ಪದ್ಧತಿ ಇವತ್ತಿಗೂ ಇದೆ, ದಲಿತರಲ್ಲಿಗೆ ಹೋದರೆ ಅಲ್ಲಿ ಕೂಡ ಬಲಗೈಯವನಿಗೆ ಎಡಗೈವನು ಕೀಳು ಎನಿಸುತ್ತದೆ. ಈ ಮನೋಭಾವನೆಯನ್ನು ಬೇರೆಯವರಿಗೆ ಕಾಣಿಸಿಕೊಳ್ಳಲಿಕ್ಕಾಗಿ ಅಲ್ಲ; ಅಂತಃಕರಣ ಪೂರ್ವಕವಾಗಿಯೇ ತೊಡೆದು ಹಾಕಿಕೊಳ್ಳದ ಯಾರಿಗೂ ಬ್ರಿಟಿಷರನ್ನು ಆಕ್ಷೇಪಿಸುವ ನೈತಿಕ ಅರ್ಹತೆ ಇರುತ್ತದೆ ಎಂದು ನಾನು ಭಾವಿಸುವುದಿಲ್ಲ. ಮೇಲಿನವರು ಮೇಲರಿಮೆಯನ್ನು ಕೆಳಗಿನವರು ಕೀಳರಿಮೆಯನ್ನು ತೊಡೆದು ಹಾಕಿಕೊಂಡಾಗ ಮಾತ್ರ ಬ್ರಿಟಿಷರನ್ನು ಆಕ್ಷೇಪಿಸಲು ನಾವು ಅರ್ಹರಾಗುತ್ತೇವೆ. ಈ ಆತ್ಮಾವಲೋಕನದ ಪ್ರಶ್ನೆಯನ್ನು ಕೃತಿಯು ಎತ್ತಿ ಹಿಡಿಯುತ್ತದೆ. ಕೃತಿಯು ಪ್ರಸ್ತಾಪಿಸುವ ಪ್ರತಿಯೊಂದು ವಿಚಾರದಲ್ಲೂ ಈ ಪ್ರಶ್ನೆಯು ಮತ್ತೆ ಮತ್ತೆ ಕಾಡುತ್ತಾ ಹೋಗುತ್ತದೆ.

ಗಾಂಧೀಜಿ ಭಾರತದಿಂದ ದಾದಾ ಅಬ್ದುಲ್ಲಾ&ಕಂಪನಿಯ ವಕೀಲರಾಗಿ ದಕ್ಷಿಣ ಆಫ್ರಿಕಾಕ್ಕೆ ಹೋದದ್ದು. ದಾದಾ ಅಬ್ದುಲ್ಲಾ ಅವರ ವ್ಯಾಜ್ಯವು ತ್ಯಾಬ್ಜಿ ಸೇಠ್ ಅವರೊಂದಿಗಿತ್ತು. ಇವರಿಬ್ಬರೂ ಸಂಬಂಧಿಗಳು. ಇವರ ವ್ಯಾಜ್ಯವನ್ನು ಗಾಂಧಿ ಕೋರ್ಟಿನ ಹೊರಗೆ ಮಧ್ಯಸ್ಥಿಕೆಯ ಮೂಲಕ ಬಗೆಹರಿಸಿದರು. ಈ ಅಂಶ ಯಾಕೆ ಮಹತ್ವದ್ದೆಂದರೆ, ಗಾಂಧೀಜಿಯವರ ನಂತರದ ದಿನಗಳ ವರ್ತನೆಗಳಲ್ಲಿ ಅಥವಾ ಇವತ್ತು ಗಾಂಧಿ ಚಿಂತನೆಗಳೆಂದು ಏನನ್ನು ಹೇಳುತ್ತೇವೆಯೋ ಅದರಲ್ಲಾಗಲಿ ಕಾಣಿಸುವುದು ಕಾನೂನಿನ ಆಚೆಗೆ ಇರುವ ನೈತಿಕ ನೆಲೆಗಟ್ಟಿನ ಪರಿಹಾರ ಮಾರ್ಗಗಳೇ ಆಗಿವೆ. ಕಾನೂನು ಒಬ್ಬನನ್ನು ಗೆಲ್ಲಿಸುತ್ತದೆ. ಮತ್ತೊಬ್ಬನನ್ನು ಸೋಲಿಸುತ್ತದೆ. ಸೋತವನು ಮತ್ತು ಗೆದ್ದವನ ಸಂಬಂಧಗಳು ಎಂದೂ ಸುಧಾರಿಸುವುದಿಲ್ಲ. ಆದರೆ ನೈತಿಕತೆ ಮಾತ್ರ ಇಬ್ಬರನ್ನೂ ಗೆಲ್ಲಿಸುತ್ತದೆ. ಈ ಆಯ್ಕೆ ಗಾಂಧೀಜಿಯವರ ಸಹಜ ಸ್ವಭಾವವೇ ಆಗಿತ್ತು ಎಂಬುದನ್ನು ಮೇಲಿನ ಘಟನೆಯು ಹೇಳುತ್ತದೆ.

ಗಾಂಧೀಜಿಯನ್ನು ಡರ್ಬಾನ್ನಲ್ಲಿ ರೈಲಿನಿಂದ ತಳ್ಳಿದ ಘಟನೆ ಬಹಳ ಪ್ರಸಿದ್ಧವಾದದ್ದು ಮತ್ತು ಆ ಘಟನೆಯೇ ಗಾಂಧೀಜಿಯ ಎಲ್ಲ ಅತ್ಯುತ್ತಮಗಳ ಹುಟ್ಟಿಗೆ ಮೂಲ ಎಂದು ಹಲವರು ಗುರುತಿಸುತ್ತಾರೆ. ಆದರೆ ಒಂದು ಘಟನೆಯ ಮೂಲಕ ಹಠಾತ್ತಾಗಿ ಗಾಂಧೀಜಿಯವರ ವ್ಯಕ್ತಿತ್ವವು ರೂಪುಗೊಂಡದ್ದಲ್ಲ ಎಂಬುದನ್ನು ಈ ಕೃತಿಯು ಹೇಳುತ್ತದೆ. ಗಾಂಧೀಜಿ ದಕ್ಷಿಣ ಆಫ್ರಿಕಾದಿಂದ ಒಂದು ಬಾರಿ ಭಾರತಕ್ಕೆ ಬಂದಾಗ ಅಲ್ಲಿ ಭಾರತೀಯರ ಮೇಲೆ ಆಗುತ್ತಿದ್ದ ದೌರ್ಜನ್ಯವನ್ನು 'ಹಸಿರು ಪುಸ್ತಕ' ದ ಮೂಲಕ ಪ್ರಕಟಿಸಿ ಸಾರ್ವಜನಿಕರ ಗಮನ ಸೆಳೆಯುತ್ತಾರೆ. ಈ ವಿಷಯ ಭಾರತ, ದಕ್ಷಿಣ ಆಫ್ರಿಕಾ, ಇಂಗ್ಲೆಂಡ್ಗಳಲ್ಲಿ ದೊಡ್ಡ ಸುದ್ದಿಯಾಗುತ್ತದೆ. ಬ್ರಿಟಿಷರು ಗಾಂಧಿ ತಮಗೆ ಸಾರ್ವಜನಿಕ ಅವಮಾನ ಮಾಡಿದರೆಂದು ಭಾವಿಸುತ್ತಾರೆ. ಮತ್ತೆ ಗಾಂಧಿ ದಕ್ಷಿಣ ಆಫ್ರಿಕಾಕ್ಕೆ ಹೋದಾಗ ಉದ್ರಿಕ್ತ ಬಿಳಿಯರು ಸುಮಾರು ನೂರು ಜನ ಸೇರಿ ಒಂಟಿಯಾಗಿ ಸಿಕ್ಕಿದ ಗಾಂಧಿಗೆ ಕೈಯಿಂದ, ಕುದುರೆಯ ಚಾಟಿಯಿಂದ, ಕಲ್ಲು, ದೊಣ್ಣೆ, ಕೊಳೆತ ಮೊಟ್ಟೆಗಳಿಂದ ಹೊಡೆದು, ಉಗುಳಿ, ತಲೆಗೆ ಚೂಪಾದ ಕಲ್ಲಿನಲ್ಲಿ ಕುಟ್ಟಿ ರಕ್ತ ಬರಿಸಿ ಹಿಂಸಿಸುತ್ತಾರೆ. ಈ ಉದ್ರಿಕ್ತ ಜನರಲ್ಲಿ ಗುರುತು

ಹಿಡಿಯಬಹುದಾದವರ ಮೇಲೆ ಮೊಕದ್ದಮೆ ಹೂಡಲು ಪೊಲೀಸ್ ಅಧಿಕಾರಿ ತಿಳಿಸಿದಾಗಲೂ ಗಾಂಧಿ ಮೊಕದ್ದಮೆ ಹೂಡುವುದಿಲ್ಲ. " ಅವರದ್ದೇನೂ ತಪ್ಪಿಲ್ಲ. ಅವರು ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ" ಎಂದು ಉತ್ತರಿಸುತ್ತಾರೆ. ಈ ರೀತಿಯ ಮನಸ್ಥಿತಿಯನ್ನು ತಂದುಕೊಳ್ಳುವುದು ಕಷ್ಟ. ಗಾಂಧಿ ಉಳಿದೆಲ್ಲರಿಗಿಂತ ಭಿನ್ನವಾಗಿ ರೂಪುಗೊಳ್ಳುತ್ತಾ ಹೋದುದರ ಮೂಲ ರಚನೆಯೇ ಹೀಗಿದೆ.

ಒಬ್ಬ ನಾಯಕನ ಜವಾಬ್ದಾರಿ ಏನು ಎಂಬುದನ್ನು ಗಾಂಧಿಯಲ್ಲಿ ಗುರುತಿಸಬಹುದು. ಜೊಹಾನ್ಸ್ ಬರ್ಗನ ಎಂಪೈರ್ ಥಿಯೇಟರ್ನಲ್ಲಿ ಸಭೆ ಸೇರಿದ ಜನರು ಪ್ರತಿಭಟನೆಗೆ ಅತ್ಯುತ್ಸಾಹದಿಂದ ಪ್ರತಿಕ್ರಿಯಿಸಿದಾಗ ಗಾಂಧಿ," ಮುನ್ನುಗ್ಗಿ ನಾನಿದ್ದೇನೆ" ಎಂದು ಹೇಳುವುದಿಲ್ಲ. ಬದಲು ಈ ಹೋರಾಟದಿಂದ ಹಣ, ಆಸ್ತಿ ಎಲ್ಲವನ್ನೂ ಕಳೆದುಕೊಳ್ಳಬೇಕಾಗಬಹುದು, ಶಾಶ್ವತವಾಗಿ ಜೈಲು ಪಾಲಾಗಬೇಕಾಗಬಹುದು ಎಂದು ಸತ್ಯದರ್ಶನವನ್ನು ಮಾಡಿಸಿ ಅದೆಲ್ಲಕ್ಕೂ ಜನರು ಮಾನಸಿಕವಾಗಿ ಸಿದ್ಧರಾದ ಮೇಲೆ ಹೋರಾಟಕ್ಕೆ ಇಳಿಯುತ್ತಾರೆ. ಪ್ರತಿಕೂಲ ಪರಿಸ್ಥಿತಿಗೆ ಮಾನಸಿಕವಾಗಿ ಹದಗೊಳ್ಳದ ಹೊರತು ಹೋರಾಟದಿಂದ ಯಶಸ್ಸು ಸಾಧ್ಯವಿಲ್ಲ ಎಂಬುದನ್ನು ಇದು ಸೂಚಿಸುತ್ತದೆ. ದಕ್ಷಿಣ ಆಫ್ರಿಕಾದಲ್ಲಿದ್ದಾಗಲೇ ಗಾಂಧೀಜಿಯ ಮಕ್ಕಳು, ಕಸ್ತೂರ್ಬಾ ಅವರೆಲ್ಲ ಹೋರಾಟಕ್ಕಿಳಿದಿದ್ದರು. ಕಸ್ತೂರ್ಬಾ, ಜೈಲಿನಲ್ಲಿ ಕೃಶರಾಗಿದ್ದರು. ಬಹುತೇಕವಾಗಿ ಜನರು ಸಾಂಸಾರಿಕರು. ಒಬ್ಬ ಹೋರಾಟಗಾರನಾಗಿ ಸಂಸಾರದ ಇತರರು ಅವರ ಪಾಡಿಗೆ ಇರುವವರಾಗಿ ಹಲವರು ಸಿಗುತ್ತಾರೆ. ಅಲ್ಲಿ ಹೋರಾಟಗಾರನ ತತ್ವ ಮತ್ತು ಕುಟುಂಬದ ತತ್ವಗಳು ಬೇರೆಬೇರೆಯಾಗಿ ಕೆಲವೊಮ್ಮೆ ಆಭಾಸವೂ ಸೃಷ್ಟಿಯಾಗುತ್ತದೆ. ಗಾಂಧೀಜಿಯ ವಿಷಯದಲ್ಲಿ ಹಾಗಲ್ಲ. ತತ್ವಗಳು ಇಡೀ ಕುಟುಂಬಕ್ಕೇ ಅನ್ವಯವಾಗಿದ್ದವು. ವಿವಿಧ ಪ್ರಮಾಣದಲ್ಲಿ ಇಡೀ ಕುಟುಂಬವೇ ಹೋರಾಟದಲ್ಲಿ ಭಾಗಿಯಾಗಿತ್ತು. ಮತ್ತು ಗಾಂಧೀಜಿಯ ಹೋರಾಟದ ಮಾದರಿಯು ಯಾರು ಯಾವಾಗ ಬೇಕಾದರೂ ಅವರವರ ಶಕ್ತ್ಯಾನುಸಾರ ಯಾವ ಹಂತದ ವರೆಗೆ ತೆಗೆದುಕೊಂಡು ಹೋಗಬಹುದಾದ ಹೋರಾಟದ ಮಾದರಿಯಾಗಿದೆ. ಅಹಿಂಸೆ ಇವತ್ತು ಸಾಧ್ಯ ಇದೆಯೇ? ಎಂದು ಹಲವರ ಪ್ರಶ್ನೆ ಇದೆ. ಸಾಧ್ಯ ಇದೆಯೇ? ಎಂದರೆ ಸಾಧ್ಯ ಇಲ್ಲ ಎಂದು ಅವನ ಅರ್ಥ. ಮಾಡಿ ನೋಡಿದ್ದೀರಾ? ಅಹಿಂಸೆಯ ಹೋರಾಟಕ್ಕಿಳಿದು ಮಾಡಿ ನೋಡಿ ವಿಫಲವಾದ ಅನುಭವದಿಂದ ಸಾಧ್ಯ ಇಲ್ಲ ಎಂದು ಹೇಳಬೇಕಲ್ಲವೆ? ಏನನ್ನೂ ಮಾಡದೆ ಸಾಧ್ಯ ಇಲ್ಲ ಎಂದರೆ? ಸ್ವಾರಸ್ಯವೆಂದರೆ ಅಹಿಂಸೆ ಎಂದ ಕೂಡಲೇ ಕೆರಳಿ ಕೆಂಡಾಮಂಡಲ ಆಗುವವರೆಲ್ಲರೂ ಇಂದಿಗೂ ಹೋರಾಟ ಎಂದರೆ ಜಾಥಾ ಹೋಗುವುದು, ಧರಣಿ ಕೂತುಕೊಳ್ಳುವುದೇ ಹೊರತು ಬಿಲ್ಲು ಬಾಣ ಹಿಡಿದು ಶಂಖ ಊದಿ ಯುದ್ಧಕ್ಕೆ ಆಹ್ವಾನಿಸುವುದಿಲ್ಲ.ಅಹಿಂಸೆಯಿಂದ ಏನೂ ಸಾಧ್ಯ ಇಲ್ಲ ಎನ್ನುವವರು ಮತ್ತೆ ಧರಣಿ ಯಾಕೆ ಕೂತುಕೊಳ್ಳುತ್ತೀರಿ? ಹೋರಾಟವನ್ನು ತಾರ್ಕಿಕ ಅಂತ್ಯದ ತನಕ ಕೊಂಡೊಯ್ಯದಿರುವುದರಿಂದ ಅಹಿಂಸೆ ಉಪಯೋಗಕ್ಕಿಲ್ಲ ಎನಿಸುವುದು. ಏಕೆಂದರೆ ಜಗತ್ತು ಅಹಿಂಸೆಯ ಹೋರಾಟದೊಂದಿಗೆ ಬದುಕಿದ ದೀರ್ಘ ಅನುಭವ ಹೊಂದಿಲ್ಲ. ಅಹಿಂಸೆಯ ಬೋಧನೆಯನ್ನು ಹಲವರು ಮಾಡಿದ್ದಾರೆ. ಆದರೆ ಅದನ್ನು ಪ್ರಯೋಗಕ್ಕಿಳಿಸಿದವರು ಗಾಂಧೀಜಿ ಒಬ್ಬರೇ.

ಹೀಗೆ ಈ ಕೃತಿಯ ಮೂಲಕ ಓ.ಆರ್. ಪ್ರಕಾಶ್ ಅವರು ಹಲವು ಮಗ್ಗುಲಿನ ಚಿಂತನೆಯನ್ನು ಬೆಳೆಯಿಸುತ್ತಾರೆ. ನಮಗೆ ಪರಿಚಯವಿರದ ದಕ್ಷಿಣ ಆಫ್ರಿಕಾದಲ್ಲಿನ ನೂರಿಪ್ಪತ್ತು ವರ್ಷಗಳ ಹಿಂದಿನ ಕಾಲಮಾನಕ್ಕೆ ಕಾಲ್ಪನಿಕವಾಗಿ ನಮ್ಮನ್ನು ಒಯ್ದು ನಮ್ಮ ಮನೋಚಿತ್ರದಲ್ಲಿ ಸ್ಥಾಪನೆಯಾಗಿರುವ ತುಂಡು ವಸ್ತ್ರಧಾರಿಯಾದ ಅಜ್ಜ ಗಾಂಧಿಯ ಜಾಗಕ್ಕೆ ಸೂಟು–ಬೂಟು ಧಾರಿಯಾದ ಯುವಕ ಗಾಂಧಿಯನ್ನು ಸ್ಥಾಪಿಸುತ್ತಾರೆ. ಈ ಕೃತಿಯ ಓದು ಗಾಢವಾದ ಒಂದು ಅಂತರಂಗದ ಅನುಭವವನ್ನು ಉಂಟು ಮಾಡುತ್ತದೆ. ಆ ಕಾರಣಕ್ಕಾಗಿಯೇ ಈ ಕೃತಿ ಹೆಚ್ಚು ಮಹತ್ವವನ್ನು ಪಡೆದಿದೆ.

**■ ಅರವಿಂದ ಚೊಕ್ಕಾಡಿ**

**(ಪುಸ್ತಕ ಕೊಳ್ಳಲು ಸಂಪರ್ಕ ಸಂಖ್ಯೆ : 9008435339)**

**ಮಹಾತ್ಮ ಗಾಂಧೀಜಿ ಅವರ ಆಶ್ರಮ ಜೀವನ**

ಆಶ್ರಮ ಎಂದರೆ ಸರಳ ಜೀವನದ ಒಂದು ಆಶ್ರಯ. ಪ್ರಕೃತಿಯೊಡನೆ ಸಮರಸವಾದ ಒಂದು ಗೂಡು. ಅದು ಕೇವಲ ಶಿಕ್ಷಣ ಸಂಸ್ಥೆಯಲ್ಲ. ಅಲ್ಲಿ ನೆಲೆಸುವವರು ಸಂಯಮಶೀಲರಾಗಿರಬೇಕು. ಬಾಹ್ಯ ಜಗತ್ತಿನ ಬಗ್ಗೆ ಒಂದು ನಿರ್ಲಿಪ್ತತೆ ರೂಢಿಸುವ ಸನ್ಯಾಸದ ಮನೋಧರ್ಮ ಪಸರಿಸಬೇಕು. ಆದರಿಂದ ಸ್ವಯಂ ಪ್ರೇರಿತ ಬಡತನ ಸಹಜವಾಗುತ್ತದೆ. ಆದ್ದರಿಂದ ಸರಳತೆ ರೂಢಿ ಮೂಲವಾಗಬೇಕು. ಆತ್ಮ ಸಾಕ್ಷಾತ್ಕಾರ ದೃಷ್ಟಿಯಿಂದ ಶೀಲವೃದ್ಧಿಯೇ ಆಶ್ರಮದ ಗುರಿ. ಅಲ್ಲಿನ ಪ್ರತಿಯೊಬ್ಬರು ಶರೀರಶ್ರಮದಲ್ಲಿ ಭಾಗವಹಿಸಲೇಬೇಕು. ಪ್ರತಿಯೊಬ್ಬರೂ ಸಮಾನರೆನಿಸಬೇಕು. ಮೇಲಿನವರೆಂಬ ಹಮ್ಮು ಕೂಡದು. ನೇತೃತ್ವ ವಹಿಸುವವರು ಮಾತಾ ಪಿತೃಗಳಂತಿದ್ದು ಎಲ್ಲರೂ ಒಂದೇ ಕುಟುಂಬದವರಂತೆ ಬಾಳಬೇಕು

(ಆಶ್ರಮ ಜೀವನದ ಬಗ್ಗೆ ಗಾಂಧೀಜಿ ಡೆನ್ಮಾರ್ಕ್‌ನ ಎಸ್ತರ್ ಪಿಯರಿಂಗ್‌ಗೆ ಬರೆದ ಪತ್ರ)

---

## MAHATMA GANDHI ON ASHRAM'S LIFE

Ashram means a refuge of simple life. It is a harmonial nest with nature. It is not just an educational institution. Those who live in Ashram must be the embodiment of patience. They must propagate the tendency of detachment towards the mundane world which lends to self inspired poverty. Therefore simplicity must be practised. The aim of Ashram is enchancing chastity through self realisation. All who live in Ashram must participate in rendering manual service. They must feel that all are equal. They should not have superiority feeling. Those who lead others should play the role of parents. All must live like the members of the family.

*(Gandhiji wrote a letter to Esthar Pearing about Ashram's life)*





ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಕಟ್ಟಡ 1965 ರಲ್ಲಿ ಅಂದಿನ ರಾಷ್ಟ್ರಪತಿ ಡಾ. ಎಸ್ ರಾಧಾಕೃಷ್ಣನ್ ಅವರಿಂದ ಉದ್ಘಾಟನೆ..






ಡಿ ಎಸ್ ನಾಗಭೂಷಣ್ ಅವರ ಗಾಂಧಿ ಕಥನ ಕೃತಿಯ 25 ನೇ ಆವೃತ್ತಿ ಇತಿಹಾಸಕಾರ ಲೇಖಕ ರಾಮಚಂದ್ರ ಗುಹಾ ಅವರಿಂದ ಬಿಡುಗಡೆ. ಮಾಜಿ ಸಚಿವ ಹಾಗೂ ಶಾಸಕ ಎಚ್ ಕೆ ಪಾಟೀಲ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ ಕೃಷ್ಣ, ಮಾಜಿ ಶಾಸಕ ಡಿ ಆರ್ ಪಾಟೀಲ್, ವಿಮರ್ಶಕ ರಾಜೇಂದ್ರ ಚೆನ್ನಿ, ಗಾಂಧಿ ಸ್ಮಾರಕ ನಿಧಿ ಸದಸ್ಯ ಎಂ ಸಿ ನರೇಂದ್ರ, ಗಾಂಧಿ ಸ್ಮಾರಕ ನಿಧಿ ಉಪಾಧ್ಯಕ್ಷ ಜಿ ಬಿ ಶಿವರಾಜ್, ಎಂ ಚಂದ್ರಶೇಖರ್ ಪ್ರತಿಷ್ಠಾನದ ಅಧ್ಯಕ್ಷೆ ಶ್ರೀಮತಿ ಸರೋಜ ಎಂ ಚಂದ್ರಶೇಖರ್, ಲೇಖಕಿ ಸವಿತಾ ನಾಗಭೂಷಣ್, ಜನಪರ ಹೋರಾಟಗಾರ್ತಿ ವಾಣಿ ಪೆರಿಯೋಡಿ ಚಿತ್ರದಲ್ಲಿದ್ದಾರೆ.



ನೇಪಾಳದ ಗಾಂಧಿವಾದಿ ಡಾ. ಚಿಂತಾಮಣಿ ನಾಹ್ ಯೋಗಿ ಗಾಂಧಿ ಭವನಕ್ಕೆ ಭೇಟಿ ನೀಡಿದ್ದರು. ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಶ್ರೀಮತಿ ಇಂದಿರಾ ಕೃಷ್ಣಪ್ಪ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಶಿಕ್ಷಣ ತಜ್ಞರು ಚಿತ್ರದಲ್ಲಿದ್ದಾರೆ.




ಗಾಂಧಿ ವಿಚಾರ ವೇದಿಕೆಯ ವತಿಯಿಂದ ಮಿನುಗು ನೋಟ ಕೃತಿಯನ್ನು ಮಾಜಿ ಪ್ರಧಾನಿ ವಾಜಪೇಯಿಯವರ ಮಾಜಿ ಸಲಹೆಗಾರ ಸುದೀಂದ್ರ ಕುಲಕರ್ಣಿ ಬಿಡುಗಡೆ ಮಾಡಿದರು. ಕೃತಿಯ ಲೇಖಕ ಎಂ ಜಿ ಹೆಗಡೆ, ಗಾಂಧಿ ವಿಚಾರ ವೇದಿಕೆ ಅಧ್ಯಕ್ಷ ಶ್ರೀಧರ ಬಿಡೆ, ವಿಚಾರವಾದಿ ಅರವಿಂದ ಚೊಕ್ಕಾಡಿ ಹಾಗೂ ಇತರರು ಚಿತ್ರದಲ್ಲಿದ್ದಾರೆ .

# Lessons from South Africa: *The fading Gandhi-Mandela legacy*

***Sudheendra Kulkarni***

Indians in South Africa are facing a troubling new reality of racism and communalism. The Hindu-Muslim divide is deepening at home; it is also, alarmingly, partitioning the Indian diaspora Above all, we should establish close people-to-people relations based on equality and free from all traces of racial prejudice towards blacks, which, we must truthfully admit, still colours our attitude towards them. Above all, our ruling establishment must know the harm its communal politics is doing to India.

Papa, I want to leave South Africa. I see no future for myself here. I'll go abroad for studies and to live the rest of my life." This is what the 16-year-old son of an Indian academic in Cape Town told his father, and the father, a new acquaintance of mine, narrated this to me as we met over dinner.

"Why, son? Why do you say so?"

"I have scored 95 per cent in my qualifying exam. But I'll never be seen as black enough to be eligible for admission in a good university here, or for a government job. The reservation system helps black students with even 50 per cent get ahead in education and employment." His son went to Japan, became an executive and is now living there. His daughter also wants to leave South Africa for studies and a career. "Soon, only I, my wife and our dog will live here," said my friend. He had previously worked in a public university in Durban for 25 years. He was good at his work. He was qualified to become a dean, but was denied promotion because, "I was an Indian and the post was given to a black colleague. Reluctantly, I came to a private university in Cape Town."

He added: "The British brought my forefathers from India to South Africa as indentured labourers or semi-slaves over 125 years ago. I am a fifth-generation South African. I have no links with India anymore. In the eyes of Indians, I am a South African. But in the eyes of radical black South Africans, I am still an Indian, an outsider. The reservation system does not affect whites because they are the wealthiest people in South Africa. They control the economy. They have one foot here and the other in Europe or America. It's people of Indian origin who have become victims of discrimination." "Would you call it reverse racism?" I asked him. "Of course, it is," he replied. "But we can't do anything. We have only two options. Keep quiet or leave the country."

Nevertheless, he also made a revealing confession. "I don't entirely blame blacks for this. We Indians are also guilty. Many Indians think they are racially superior to

blacks. For example, my mother never treats poor black servants in our home as human beings. She fires them after six to eight months and hires new ones. They are helpless because there is a lot of poverty and joblessness among blacks."

I had many such eye-opening conversations about the current situation in South Africa during my trip to Johannesburg, Pretoria, Durban and Cape Town last month. Not all blacks have a negative attitude towards people of Indian origin. A majority of them admire Indians for their contribution to South Africa's progress and prosperity. However, a small but aggressive section of the black community has become xenophobic. Their outlook towards Indians worsened when the Gupta brothers, a wealthy Indian business family, managed "state capture" by building a highly corrupting relationship with the country's former president Jacob Zuma (2009-2018). A radical party of black Africans, called the Economic Freedom Fighters, which often makes viciously anti-Indian remarks, coined the term "Zupta" for him — that is, Zuma plus Gupta. When Zuma was arrested in July 2021 over corruption charges, riots broke out violently targeting Indians in many places. Hence, many Indians are also feeling insecure.

All this is worrying because India has had close historical ties with South Africa. After all, Mahatma Gandhi lived in South Africa for 21 years (1893-1914) and led the non-violent Satyagraha movement against the injustice suffered by Indians under the white rule. Nelson Mandela, leader of the epic anti-Apartheid struggle, was inspired by Gandhi and Nehru. His party, the African National Congress, took its name after the Indian National Congress. But the situation has changed now. Indians are marginalised in politics and government. Being a minority, they have no hope of being elected. They account for only 2.6 per cent of South Africa's population of 6 crore.

In their campaign against Indians, black extremists have resorted to another ploy. They have launched the false propaganda that Gandhi was a racist. They criticise even Mandela for his dream of making South Africa a non-racial "rainbow nation" with equal rights for all. "I am opposed to white oppression, but I am also opposed to black oppression," Mandela had said. That is not the reassurance Indian South Africans hear from today's ANC, which has been governing the country since 1994. "It has become corrupt, faction-ridden and incapable of controlling rising crime and hostility towards non-blacks," several people told me.

I encountered another disturbing feature when I went to Lenasia, a large Indian township near Johannesburg. The polarising anti-Muslim politics in India has begun to divide the Indian diaspora in South Africa on communal lines. I was pained — indeed, the Mahatma would have been deeply pained — to hear that "Many young Indian Muslims do not want to identify themselves as Indian." Indians of all castes, religions and linguistic communities had come together under his leadership in South Africa. Similarly, they unitedly participated in the ANC's subsequent anti-Apartheid struggle.

From Africa, I went to Rwanda and Kenya. What did I learn from this visit? In short, Indians must take Africa seriously and build comprehensively cooperative relations with all its 54 countries. Africa's importance is growing immeasurably in today's fast-changing world. Above all, we should establish close people-to-people relations based on equality and free from all traces of racial prejudice towards blacks, which, we must truthfully admit, still colours our attitude towards them. Above all, our ruling establishment must know the harm its communal politics is doing to India. The Hindu-Muslim divide is deepening at home; it is also, alarmingly, partitioning the Indian diaspora.

The writer, a close aide of former Prime Minister Atal Bihari Vajpayee, has recently established the Gandhi-Mandela Centre for India-Africa Friendship.

***Courtesy :***
***The Indian Express***

# ಪದಬಂಧ-01



ಅ.ನಾ.ಪ್ರಹ್ಲಾದರಾವ್

## ಎಡದಿಂದ ಬಲಕ್ಕೆ

2. ವಕೀಲಿ ವೃತ್ತಿಯಲ್ಲಿ ತರ್ಕ ಮಾಡುವವನು (2)
5. ಗಾಂಧಿ ಹೆಸರಿನೊಂದಿಗೆ ಸೇರಿಕೊಂಡ ತಂದೆಯ ಹೆಸರು (5)
7. ರಾಣೀವಾಸದ ನಿಕಟ ಸಂಪರ್ಕವಿದ್ದ ಗಾಂಧಿ ತಾಯಿ (5)
8. ಯೌವ್ವನದಲ್ಲಿ ಗಾಂಧಿ ಹೆಂಡತಿಯ ದೈಹಿಕ ಆಕರ್ಷಣೆಗೆ ಈಡಾದ ವಿಲಾಸಿಯೂ ಆಗಿದ್ದರು (3)
10. ಪೋರ್‌ಬಂದರ್ ಸಂಸ್ಥಾನದ ದಿವಾನರಾಗಿದ್ದ ಗಾಂಧಿಯವರ ತಾತ ಉತ್ತಮಚಂದ್ ಅವರ ಪ್ರಸಿದ್ಧ ಹೆಸರು (4)
12. ಬ್ಯಾರಿಸ್ಟರ್ ಮುಗಿಸಿ ಬಂದ ಗಾಂಧಿ ಮುಂಬೈನಲ್ಲಿ ಮಾಡಿಕೊಂಡ ವಾಸಸ್ಥಾನ (2)
14. ವಿಜಯಪುರ ಜಿಲ್ಲೆ ಇಂಡಿ ತಾಲ್ಲೂಕಿನ ಒಂದು ಗ್ರಾಮ (2)
15. ಮಳೆ ಸುರಿಸಲು ಸಜ್ಜಾದ ಮೇಘ (2)
16. ಸಮುದ್ರಪಕ್ಷಿಗೆ ಈ ಹೆಸರು (2)
17. ಇಂಗ್ಲೆಂಡಿನಲ್ಲಿ ಕಾನೂನು ವ್ಯಾಸಂಗ ಮಾಡಲು ಹೊರಟ ವೇಳೆಗೆ ಗಾಂಧಿ ಅವರಿಗೆ ಜನಿಸಿದ್ದ ಮೊದಲ ಮಗ (4)
18. ತಮ್ಮ ಮಖೇಡಿತನದಿಂದ ಗಾಂಧಿ ಮಾಡದ ಗೆಳೆತನ (2)
19. ಘಾನಾ ದೇಶದಲ್ಲಿರುವ ಒಂದು ಜನಾಂಗ (2)
20. ಅವಯವಗಳಿಂದ ಮೆದುಳಿಗೆ ಸಂದೇಶ ಒಯ್ಯುವ ತಂತು (2)
21. ರಾಜಕೋಟೆಯಲ್ಲಿ ಜನಿಸಿದ ಗಾಂಧಿ ಎರಡನೆ ಪುತ್ರ (4)
23. ವ್ಯವಸ್ಥಿತ ಅಪರಾಧಗಳ ಮುಖ್ಯಸ್ಥ (2)
24. ಮೋಹನದಾಸನಿಗೆ ನೀಡಿದ ಮುದ್ದಿನ ಹೆಸರು ತಿರುಗಿದೆ (3)
26. ತುಂಬಾ ಭಯಪಡುತ್ತಿದ್ದ ಬಾಲಕ ಗಾಂಧಿಯ ಮನೋದಿಗಂತ ವಿಸ್ತರಿಸಲು ಕಾರಣವಾದ ಪೌರಾಣಿಕ ನಾಟಕ (6)
27. ದೇಶ ಇಬ್ಭಾಗವಾದಾಗ ನಡೆದ ಪ್ರತಿಭಟನೆಯ ರೂಪ (2)

## ಮೇಲಿಂದ ಕೆಳಕ್ಕೆ

1. ಭಜನೆ ಮೂಲಕ ಗಾಂಧಿ ಸ್ಮರಿಸುತ್ತಿದ್ದ ಭಗವಾನ್ (2)
2. ಕಕ್ಷಿದಾರನ ಪರವಾಗಿ ಗಾಂಧಿ ಮಂಡಿಸಿದ ತರ್ಕ (2)
3. ಗಾಂಧಿ ಒಗ್ಗೂಡಿಸಲು ಪ್ರಯತ್ನಿಸಿದ ವಿವಿಧ ಧರ್ಮ (2)
4. ವ್ಯಾಪಾರದ ಸೂಚಕವಾದ ಕುಟುಂಬದ ಹೆಸರಿನೊಂದಿಗೆ ಮೋಹನದಾಸರಿಗಿದ್ದ ಮತ್ತೊಂದು ಹೆಸರು (4)
5. ಹದಿಮೂರು ವರ್ಷದ ಗಾಂಧಿಯನ್ನು ಕೈ ಹಿಡಿದ ಅದೇ ವಯಸ್ಸಿನ ಬಾಲಕಿ (4)
6. ಹತಮಾರಿಯಂತೆ ಕಾಣುತ್ತಿರುವ ದುರ್ಗೆ (2)
9. ಶ್ರೀಕೃಷ್ಣನ ಗೆಳೆಯ ಸುಧಾಮನ ಊರೂ ಎಂದು ಗುರುತಿಸಲ್ಪಡುವ ಪೋರ್‌ಬಂದರ್ ನೆಲೆಯಾಗಿದ್ದ ಪ್ರದೇಶ (4)
10. ಕಾರಾಗೃಹದಲ್ಲಿದ್ದಾಗ ಗಾಂಧಿ ಬರೆಯುತ್ತಿದ್ದ ಪತ್ರ (2)
11. ಶಾಂತಿ, ಸತ್ಯಾಗ್ರಹದ ಮೂಲಕ ಎಲ್ಲವೂ ಸಾಧ್ಯ ಎಂದು ಬಿಂಬಿಸಿದ 2016ರ ಹಿಂದಿ ಚಲನಚಿತ್ರ (4)
12. ದಕ್ಷಿಣ ಆಫ್ರಿಕದಲ್ಲಿ ಗಾಂಧಿ ಹೋರಾಟ ಮಾಡಿದ ಕರಿಯ ಜನರೇ ಹೆಚ್ಚಿದ್ದ ಪ್ರದೇಶ (3)
13. ಬ್ರಿಟನ್ ದೇಶದಲ್ಲಿ ಕಾನೂನು ವ್ಯಾಸಂಗ ಮಾಡಿದ ಗಾಂಧಿ ಕೈಗೊಳ್ಳಬೇಕೆಂದಿದ್ದ ಜೀವನೋಪಾಯ ಕಸುಬು (5)
15. ಮುಂದೆ ಮಹಾತ್ಮರಾಗಿ ಕೋಟ್ಯಾಂತರ ಜನರಲ್ಲಿ ಸಂಚಲನ ಮೂಡಿಸಿದ ಗಾಂಧಿಯವರಿಗೆ ಇರಿಸಿದ್ದ ಹೆಸರು (5)
16. ಸಹಪಾಠಿಗಳೊಂದಿಗೆ ಗಾಂಧಿ ಚರ್ಚಿಸುತ್ತಿದ್ದಾಗ ಬರುತ್ತಿದ್ದ ವಿಷಯದಲ್ಲಿ ಸೇರಿದ್ದ ದಾಸ್ಯ ಪರಾಧೀನತೆ (5)
22. ಯಾವುದೂ ಶಾಶ್ವತವಲ್ಲ ಎಲ್ಲವೂ ನಾಶ (2)
25. ಗಾಂಧಿ ಕುಟುಂಬ ಸೇರಿದ್ದ ವೈಶ್ಯ ಕುಲದ ಪಂಗಡ (2)

ಪದಬಂಧ – 1 ರ ಉತ್ತರವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು




ಮಹಾತ್ಮ ಗಾಂಧೀಜಿಯವರ 150ನೇ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ತನ್ನದೇ ವೆಚ್ಚದಲ್ಲಿ ಬಾ-ಬಾಪೂ 150ನೇ ವರ್ಷಾಚರಣೆ ಹೆಸರಿನಲ್ಲಿ ವಿಶೇಷ ಅಂಚೇ ಕವರ್ ಮತ್ತು ಅಂಚೆ ಮುದ್ರೆಯನ್ನು ಪ್ರಕಟಿಸಿತು .

# ಭಾವಚಿತ್ರಗಳಲ್ಲಿ ಕಸ್ತೂರಬಾ



ಮಹಾತ್ಮಾ ಗಾಂಧಿ ಅವರೊಂದಿಗೆ ಕಸ್ತೂರಬಾ (1915)



ಕಸ್ತೂರಬಾ ತಮ್ಮ ನಾಲ್ಕು ಮಕ್ಕಳೊಂದಿಗೆ



ದಕ್ಷಿಣ ಆಫ್ರಿಕಾದಲ್ಲಿ ಮಹಾತ್ಮ ಗಾಂಧಿ ಅವರೊಂದಿಗೆ
ಕಸ್ತೂರಬಾ (1913)



ಕುಟುಂಬ ಸದಸ್ಯರೊಂದಿಗೆ ಕಸ್ತೂರಬಾ



ಮಕ್ಕಳೊಂದಿಗೆ ಮಹಾತ್ಮಾ ಗಾಂಧಿ ಮತ್ತು ಕಸ್ತೂರಬಾ

